# ಕಲಿಯುಗ

## (ಎಂದಿಗೂ ಯುಗಾಂತವಾಗದು)




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org







# ಕಲಿಯುಗ

## (ಎಂದಿಗೂ ಯುಗಾಂತವಾಗದು)


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 80/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ – ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ -
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ-
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು-
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು-
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು-
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು-
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು-
    ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ - ದೋಬೂಚುಲಾಟ.
111. ಪ್ರಜಲು - ಮಾನವುಲು.
112. ಆಸ್ತಿ - ದೋಸ್ತಿ
113. ದಂತಮು-ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968.
**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ)
Cell : 9632418716

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಶಿವರಾಜ**
(ಸಾ)(ಕಿ) ಕುಕನೂರು (ಪೊ) ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560085
Cell : 9036982829

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560068
Cell : 08970772028, 07411459912, 07406039453

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ಯುಗಗಳು ನಾಲ್ಕು ಎಂದು ಬಹುಶ ಎಲ್ಲರಿಗೂ ತಿಳಿದಿದೆ. ಹಾಗೆ ತಿಂಗಳುಗಳು ಹನ್ನೆರಡೆಂದು, ವಾರಗಳು ಏಳೆಂದು, ಸಂವತ್ಸರಗಳು ಅರವತ್ತು (60) ಎಂದು ತಿಳಿದಿದೆ. ಸಂವತ್ಸರಗಳು ಕ್ರಮವಾಗಿ 1) ಪ್ರಭವ 2) ವಿಭವ 3) ಶುಕ್ಲ 4) ಪ್ರಮೋದೂತ 5) ಪ್ರಜೋತ್ಪತ್ತಿ 6) ಅಂಗೀರಸ 7) ಶ್ರೀಮುಖ 8) ಭವ 9) ಯುವ 10) ಧಾತ 11) ಈಶ್ವರ 12) ಬಹುಧಾನ್ಯ 13) ಪ್ರಮಾಧಿ 14) ವಿಕ್ರಮ 15) ವೃಷ 16) ಚಿತ್ರಭಾನು 17) ಸ್ವಭಾನು 18) ತಾರಣ 19) ಪಾರ್ಥಿವ 20) ವ್ಯಯ 21) ಸರ್ವಜಿತ್ 22) ಸರ್ವಧಾರಿ 23) ವಿರೋಧಿ 24) ವಿಕೃತಿ 25) ಖರ 26) ನಂದನ 27) ವಿಜಯ 28) ಜಯ 29) ಮನ್ಮಥ 30) ದುರ್ಮುಖಿ 31) ಹೇವಳಂಬಿ 32) ವಿಳಂಬಿ 33) ವಿಕಾರಿ 34) ಶಾರ್ವರಿ 35) ಪ್ಲವ 36) ಶುಭಕೃತ್ 37) ಶೋಭಕೃತ್ 38) ಕ್ರೋಧಿ 39) ವಿಶ್ವಾವಸು 40) ಪರಾಭವ 41) ಪ್ಲವಂಗ 42) ಕೀಲಕ 43) ಸೌಮ್ಯ 44) ಸಾಧಾರಣ 45) ವಿರೋಧಿಕೃತ್ 46) ಪರೀಧಾವಿ 47) ಪ್ರಮಾದೀಚ 48) ಆನಂದ 49) ರಾಕ್ಷಸ 50) ನಳ 51) ಪಿಂಗಳ 52) ಕಾಳಯುಕ್ತಿ 53) ಸಿದ್ಧಾರ್ಥಿ 54) ರೌದ್ರಿ 55) ದುರ್ಮತಿ 56) ದುಂದುಭಿ 57) ರುಧಿರೋದ್ಗಾರಿ 58) ರಕ್ತಾಕ್ಷಿ 59) ಕ್ರೋಧನ 60) ಅಕ್ಷಯ. ಈ ಅರವತ್ತು ಸಂವತ್ಸರಗಳು ಕಾಲಚಕ್ರದಲ್ಲಿ ವರ್ತಮಾನ ಕಾಲದೊಳಗೆ ಒಂದೊಂದಾಗಿ ಬಂದು ಹೋಗುತ್ತಿರುವವು. ಪ್ರಭವ ಎಂಬ ಹೆಸರಾದ ಸಂವತ್ಸರದಿಂದ ಪ್ರಾರಂಭವಾದ ವರ್ತಮಾನ ಕಾಲವು, ಕೊನೆಯದಾದ ಅಕ್ಷಯ ಸಂವತ್ಸರಕ್ಕೆ ಮುಗಿಯುವುದಲ್ಲದೆ, ಪುನಃ ಪ್ರಭವ ಸಂವತ್ಸರದಿಂದ ಪ್ರಾರಂಭವಾಗುತ್ತದೆ. ಈ ವಿಧವಾಗಿ ಒಂದಾದ ನಂತರ ಒಂದು ಬಂದು, ಕಾಲ ಚಕ್ರದೊಂದಿಗೆ ಅರವತ್ತು ಸಂವತ್ಸರಗಳು ತಿರುಗುತ್ತಿವೆ. ಈಗ ನಾವಿರುವ ವರ್ತಮಾನವು ಖರ ನಾಮ ಸಂವತ್ಸರ. ನಾನು ಹುಟ್ಟಿರುವುದು ವಿಕೃತಿನಾಮ ಸಂವತ್ಸರ, ಆದ್ದರಿಂದ ವಿಕೃತಿ ಕಳೆದುಹೋಗಿ ಈಗ ಖರ ನಡೆಯುತ್ತಿದೆ. ಇದರಿಂದ ನನ್ನ ಶರೀರದ ವಯಸ್ಸು 61 ಕಳೆದು 62ರಲ್ಲಿ ನಡೆಯುತ್ತಿದೆ. ಪ್ರಸ್ತುತ ಖರನಾಮ ಸಂವತ್ಸರ (ವರ್ಷ)ವು ಸಹ ಎರಡು ತಿಂಗಳು ಮಾತ್ರವಿದೆ. ನಂತರ ನಂದನ ನಾಮ

ಸಂವತ್ಸರ ಯುಗಾದಿ ಹಬ್ಬದಿಂದ ಪ್ರಾರಂಭವಾಗುತ್ತಿದೆ. ಆದ್ದರಿಂದ ಎರಡು ತಿಂಗಳುಗಳು ಕಳೆದು ಹೋದರೆ ಖರನಾಮ ಸಂವತ್ಸರ ಮುಗಿಯುತ್ತದೆ. ಆಗ ನನ್ನ ವಯಸ್ಸು ಸಹ 62 ವರ್ಷಗಳು ಮುಗಿದು ನಂದನನಾಮ ಸಂವತ್ಸರದಿಂದ 63 ಪ್ರಾರಂಭವಾಗುತ್ತದೆ. ಹೀಗೆ ಯಾರಾದರೂ ಅವರು ಹುಟ್ಟಿದ ಸಂವತ್ಸರದಿಂದ ಅವರ ವಯಸ್ಸು ಲೆಕ್ಕಿಸಿಕೊಳ್ಳಬಹುದು.

ಪ್ರಸ್ತುತ ಕಾಲದಲ್ಲಿ ಪೂರ್ವದಲ್ಲಿ ಇಂದೂಗಳಾಗಿದ್ದ ಮನುಷ್ಯರು ಹಿಂದೂಗಳಾಗಿ ಬದಲಾಗಿ, ತಮ್ಮ ಮತದ ಹೆಸರೆ ಮರೆತುಹೋಗಿರುವುದೇ ಅಲ್ಲದೆ ತಮ್ಮ ಕಾಲದೊಳಗಿನ ಸಂವತ್ಸರಗಳ ಹೆಸರುಗಳನ್ನು, ತಿಂಗಳುಗಳ ಹೆಸರುಗಳನ್ನು ಮರೆತುಹೋಗಿದ್ದಾರೆ. ಕೊನೆಗೆ ಕ್ರೈಸ್ತ ಶಕ ಸಂವತ್ಸರಗಳನ್ನು, ತಿಂಗಳುಗಳನ್ನು ಹೇಳಿಕೊಳ್ಳುತ್ತಿದ್ದಾರೆ. ನಾವು ಹಿಂದೂ ಧರ್ಮ ರಕ್ಷಕರೆಂದು ಗಂಟಲು ಅರಿದುಕೊಳ್ಳುವವರು ಸಹ ಜನವರಿ ಒಂದನೇ ದಿನಾಂಕವನ್ನು ಹೊಸ ಸಂವತ್ಸರ ಎಂದು ಹೇಳಿಕೊಳ್ಳುತ್ತಿದ್ದಾರೆ. ಹಿಂದೂ (ಇಂದೂ) ಸಂಸ್ಕೃತಿಯೊಂದಿಗೆ ಸಂಬಂಧವಿಲ್ಲದ ಪ್ರೇಮಿಗಳ ದಿನವನ್ನು ವಿರೋಧಿಸುವವರು, ಕ್ರೈಸ್ತ ಸಂಸ್ಕೃತಿ ಪ್ರಕಾರ ಜನವರಿ ಒಂದನೇ ದಿನಾಂಕವನ್ನು ಹೊಸ ಸಂವತ್ಸರವೆಂದು ಹಿಂದೂಗಳು ಲೆಕ್ಕಿಸಿಕೊಳ್ಳಬಾರದೆಂದು ಏಕೆ ವಿರೋಧಿಸಿಲ್ಲ? ಹಾಗೆ ವಿರೋಧಿಸದಿರುವುದಕ್ಕೆ ಕಾರಣ ಈಗಿನ ಹಿಂದೂಗಳಿಗೆ ಅವರ ಕಾಲಮಾನವಾಗಲಿ, ಅರವತ್ತು ಸಂವತ್ಸರಗಳ ಹೆಸರುಗಳಾಗಲಿ, ಹನ್ನೆರಡು ತಿಂಗಳುಗಳಾಗಲಿ ತಿಳಿಯದೇ ಹೋಗಿವೆಯೆಂದೆ ಹೇಳಬಹುದು. ಇಂದೂ ಎಂಬ ಪವಿತ್ರ ಶಬ್ದ ಅರ್ಥ ರಹಿತವಾದ ಹಿಂದೂ ಶಬ್ದವಾಗಿ ಬದಲಾದಹಾಗೆ, ಯುಗಾದಿ ಎಂಬ ಶಬ್ದ ಸೃಷ್ಟ್ಯಾದಿಯನ್ನು ಜ್ಞಾಪಿ ಸುತ್ತಿರುವಾಗ, ಕೊನೆಗೆ ಆ ಹೆಸರು ಅರ್ಥವಿಲ್ಲದ ಉಗಾದಿ ಎಂದು ಬದಲಾಗಿದೆ. ನಮ್ಮ ಸಂಸ್ಕೃತಿ ಪ್ರಕಾರ ನಾವು ಮೊದಲಿನಿಂದಲೂ ಇಂದೂಗಳು. ಇಂದೂಗಳೆನ್ನುವ ಶಬ್ದ ಕಾಲ ಕ್ರಮದಲ್ಲಿ ಹಿಂದೂಗಳು ಎನ್ನುವ ಶಬ್ದವಾಗಿ ಬದಲಾಗಿದೆಯೆಂದು ನಾವು ಹೇಳಿದರೆ, ಅರ್ಥ ಮಾಡಿಕೊಳ್ಳದ ಪ್ರಜೆಗಳು ಕೆಲವರು, ನಾವು ಹಿಂದೂ ಮತವನ್ನು ರಕ್ಷಿಸುತ್ತೇವೆಂದು ಹೆಸರು

ಇಟ್ಟುಕೊಂಡಿರುವವರೂ, ನಮ್ಮನ್ನು ಪರಮತಸ್ಥರೆಂದು ವರ್ಣಿಸಿ ಹೇಳುತ್ತಿದ್ದಾರೆ. ಕೊನೆಗೆ ಇಂದೂಗಳನ್ನು ಇಂದೂಗಳೆ ಗುರುತಿಸದೆ ಕುರುಡರಾಗಿ ನಿಮ್ಮ ಇಂದೂ ಮತ ಬೇರೆ, ನಮ್ಮ ಹಿಂದೂಮತ ಬೇರೆ ಎನ್ನುತ್ತಿದ್ದಾರೆ. ಇಂತಹ ದುಸ್ಥಿತಿ, ನಮ್ಮ ಸಂಸ್ಕೃತಿಯನ್ನೇ ನಾವು ಮರೆಯುವಹಾಗೆ ಮಾಡಿದೆ. ಇಂತಹ ದುಸ್ಥಿತಿಗೆ ಅಳಬೇಕೋ ನಗಬೇಕೋ ಅರ್ಥವಾಗುತ್ತಿಲ್ಲ. ಈ ವಿಧವಾದ ಅಜ್ಞಾನ ಸ್ಥಿತಿಯಿಂದ ಮನುಷ್ಯ ಜ್ಞಾನಸ್ಥಿತಿಯೊಳಗೆ ಬಂದು, ತನ್ನ ಸಂಸ್ಕೃತಿಯಾದ ಇಂದೂತ್ವವನ್ನು ಗುರುತಿಸಿ ಕೊನೆಗೆ ಯುಗಾದಿಯನ್ನು ಉಗಾದಿ ಎನ್ನದೆ ಯುಗಾದಿ ಎಂದೇ ಅನ್ನುತ್ತಾರೆಂದು, ಹಾಗೇ ಇಂದೂವನ್ನು ಹಿಂದೂ ಎನ್ನದೆ ಇಂದೂ ಎಂದು ಹೇಳುವನೆಂದು ಆಶಿಸುತ್ತ, ಈಗ **"ಕಲಿಯುಗ ಎಂದಿಗೂ ಯುಗಾಂತ ವಾಗದು"** ಎಂಬ ಈ ಚಿಕ್ಕ ಗ್ರಂಥವನ್ನು ಬರೆಯಲು ಸಿದ್ಧರಾಗಿದ್ದೇವೆ.

ಇಂದೂ ಸಂಸ್ಕೃತಿ ಒಂದು ಮತವಲ್ಲ, ಅದು ಒಂದು ಪಥ. ಪಥ ಎಂದರೆ ಮಾರ್ಗ ಎಂದು ಅರ್ಥ. ಇದು ಯಾವ ಮಾರ್ಗವೆಂದು ಯಾರಾದರೂ ಕೇಳಿದರೆ ಇದು ಇಂದೂ ಪಥವೆಂದು ಧೈರ್ಯವಾಗಿ ಹೇಳಬಹುದು. ಇಂದೂ ಪಥ ಎಂದರೆ ಜ್ಞಾನಮಾರ್ಗವೆಂದು ಹೇಳಬಹುದು. ಇಂದೂ ಎಂಬ ಶಬ್ದವು ದೈವ ಜ್ಞಾನಕ್ಕೆ ಬದುಲು ಬಳಸುವ ಶಬ್ದ. ಇಂದೂ ಎಂದರೆ ಚಂದ್ರನೆಂದು ಅರ್ಥ. ಚಂದ್ರನನ್ನು ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಜ್ಞಾನ ಚಿಹ್ನೆ ಎಂದು ಹೇಳುತ್ತಿದ್ದೇವೆ. ನಾನು ಜ್ಞಾನಿ ಎಂದು ತಿಳಿಸುವುದಕ್ಕೆ ಶಂಕರನು ತನ್ನ ತಲೆಯ ಮೇಲೆ ಚಂದ್ರನನ್ನು ಆಭರಣವಾಗಿ ಧರಿಸಿ ತೋರಿಸಿದ್ದಾನೆ. ನೀವು ಎಲ್ಲಿಯಾದರೂ ಶಂಕರನ (ಶಿವನ) ತಲೆಯ ಮೇಲೆ ಚಂದ್ರನನ್ನು ನೋಡಬಹುದು. ಹಾಗೆಯೇ ನಾನು ಯೋಗಿ ಮತ್ತೆ ಯೋಗೀಶ್ವರನೆಂದು ಅರ್ಥಕೊಡುವ ಹಾಗೆ, ಕೃಷ್ಣನು ತನ್ನ ತಲೆಮೇಲೆ ನವಿಲುಗರಿಯನ್ನು ಧರಿಸಿದ್ದಾನೆ. ಆ ಅರ್ಥವು ತಿಳಿಯದ ಹಿಂದೂಗಳು (ಇಂದೂಗಳು) ಈಗ ಇರುವುದರಿಂದ ಇಂದೂ ಸಂಸ್ಕೃತಿ ಅಗಮ್ಯಗೋಚರವಾಗಿ ಬದಲಾಗಿದೆ. ಪ್ರಪಂಚ ದೇಶಗಳೆಲ್ಲದರಲ್ಲಿಯೂ ಒಂದೇ ಒಂದು ಭಾರತದೇಶ ಮಾತ್ರವೆ ಇಂದೂ ದೇಶವಾಗಿ (ಜ್ಞಾನದೇಶವಾಗಿ)

ಲೆಕ್ಕಿಸಲಾಗಿದೆ. ಪೂರ್ವವು ದೈವಜ್ಞಾನ ನಿಲಯವಾದ ಇಂದೂದೇಶದಲ್ಲಿನ ಪ್ರಜೆಗಳು ಜ್ಞಾನ ಸಂಪನ್ನರಾಗಿದ್ದು ಜ್ಞಾನಶಕ್ತಿ ಹೊಂದಿರುತ್ತಿದ್ದರು. ಜ್ಞಾನಶಕ್ತಿ ಇರುವವರಲ್ಲಿ ಭಾರತದೇಶ ಒಂದೇ ಹೆಸರುವಾಸಿಯಾಗಿತ್ತು. ಆದ್ದರಿಂದ ಕೆಲವು ಲಕ್ಷ ವರ್ಷಗಳ ಹಿಂದಿನಿಂದ ಭಾರತ ದೇಶ ಇಂದೂ ದೇಶವಾಗಿ ಹೆಸರು ಹೊಂದಿದೆ. ಆದರೆ ಈ ದಿನ ಭಾರತ ದೇಶದ ಪೂರ್ವ ಚರಿತ್ರೆ ತಿಳಿಯದ ಮನುಷ್ಯರು ಕೆಲವರು ನಾವು ಹಿಂದುಗಳೆಂದು, ನಾವು ಹಿಂದೂಮತ ಸಂರಕ್ಷಕ ರೆಂದು, ವಿಧ ವಿಧ ಹೆಸರಿಂದ ಸಂಘಗಳನ್ನು ಏರ್ಪಡಿಸಿಕೊಂಡು, ಎಳ್ಳಷ್ಟು ಜ್ಞಾನ ತಿಳಿಯದವರಾಗಿ ಪೂರ್ವವಿದ್ದ ಇಂದೂತ್ವವನ್ನು ಮರೆತುಹೋಗಿ ನಾವು ಹಿಂದೂಗಳೆಂದು ಹೇಳಿಕೊಳ್ಳುತ್ತಿದ್ದಾರೆ.

ಯಾರು ಹೇಗೆ ಹೇಳಿಕೊಂಡರು, ನಾವು ಇಂದೂಗಳಲ್ಲ ಹಿಂದುಗಳೆಂದು ಹೇಳಿಕೊಂಡರು, ಕೇವಲ ಹೆಸರು ಬದಲಿಸಿಕೊಂಡ ನಾವು ನಷ್ಟ ಹೊಂದಿರುವು ದೇನು ಇಲ್ಲ. ಆದರೆ ಕೊನೆಗೆ ಇಂದೂ (ಹಿಂದೂ) ಸಂಸ್ಕೃತಿಯಲ್ಲಿನ ಕಾಲದ ಮಾಸಗಳ ಹೆಸರನ್ನು, ಸಂವತ್ಸರಗಳ ಹೆಸರನ್ನು ತಿಳಿದುಕೊಳ್ಳದೆ ನಷ್ಟಹೋಗುವುದು ವಿಚಿತ್ರವಾಗಿದೆ. ಹಿರಿಯರಿಗೆ ತಿಳಿಯದೇ ಇರುವಾಗ ಮನೆಯಲ್ಲಿನ ಮಕ್ಕಳಿಗೂ ಸಹ ತಿಂಗಳುಗಳ ಹೆಸರುಗಳಾಗಲಿ, ಸಂವತ್ಸರಗಳ ಹೆಸರುಗಳಾಗಲಿ ತಿಳಿಯ ದಿರುವುದು ವಿಚಿತ್ರವೇನಲ್ಲ. ಈ ದಿನ ವಿದೇಶಿ ಭಾಷೆಗಳ ಓದಿನಲ್ಲಿ ಮುಳುಗಿ ಕನ್ನಡ ಓದನ್ನು ತಿಳಿಯದೇ ಹೋಗಿರುವುದರಿಂದ ಬಹಳ ಜನಕ್ಕೆ ಕನ್ನಡ ಸಂವತ್ಸರಾದಿಯಾಗಲಿ, ಕನ್ನಡ ತಿಂಗಳುಗಳಾಗಲಿ, ಕನ್ನಡ ಸಂವತ್ಸರ ಹೆಸರಾಗಲಿ ತಿಳಿಯದಂತಾಗಿವೆ. ಇಂದೂ (ಹಿಂದೂ) ಸಂಸ್ಕೃತಿ ಹೀನಸ್ಥಿತಿಯಲ್ಲಿರದೆ ಉನ್ನತ ಸ್ಥಿತಿಯಲ್ಲಿರಬೇಕಾದರೆ, ನಾವು ಕಾಲಗಮನದಲ್ಲಿನ ಹೆಸರುಗಳನ್ನು ತಪ್ಪದೆ ತಿಳಿಯಬೇಕು. ಮೊದಲಿನಲ್ಲಿಯೇ ಸಂವತ್ಸರಗಳ ಹೆಸರುಗಳನ್ನು ತಿಳಿದು ಕೊಂಡಿದ್ದೇವೆ. ಈಗ ತಿಂಗಳುಗಳ ಹೆಸರುಗಳನ್ನು ಕುರಿತು ತಿಳಿದು ಕೊಳ್ಳೋಣ. ತಿಂಗಳುಗಳ ಹೆಸರುಗಳು ಕ್ರಮವಾಗಿ 1) ಚೈತ್ರ 2) ವೈಶಾಖ 3) ಜ್ಯೇಷ್ಠ 4) ಆಷಾಢ 5) ಶ್ರಾವಣ 6) ಭಾದ್ರಪದ 7) ಆಶ್ವೀಯುಜ 8) ಕಾರ್ತಿಕ

9) ಮಾರ್ಗಶಿರ 10) ಪುಷ್ಯ 11) ಮಾಘ 12) ಫಾಲ್ಗುಣ. ಇವು ನಮ್ಮ ಕನ್ನಡ ಭಾಷೆಯಲ್ಲಿನ ಹಿಂದೂ ತಿಂಗಳುಗಳಾದರೆ, ಈ ದಿನ ಬಹಳ ಜನಕ್ಕೆ ಆಂಗ್ಲ ಭಾಷೆಯಲ್ಲಿನ ತಿಂಗಳುಗಳು ಚೆನ್ನಾಗಿ ತಿಳಿದಿವೆ ಆದರೆ, ನಮ್ಮ ತಿಂಗಳುಗಳು ನಮಗೆ ತಿಳಿಯದಂತಾಗಿವೆ. ಜನವರಿಯಿಂದ ಡಿಸೆಂಬರ್ ವರೆಗಿರುವ ತಿಂಗಳುಗಳು ಕ್ರಮವಾಗಿ ತಿಳಿದರೂ, ಕನ್ನಡ ತಿಂಗಳುಗಳು ಮಾತ್ರ ಒಂದು ಸಹ ತಿಳಿದಿಲ್ಲವೆಂದು ಹೇಳಬಹುದು.

ಯಾವುದೇನಾದರು ಇಂದೂ (ಹಿಂದೂ) ಸಂಸ್ಕೃತಿ ದೊಡ್ಡದೆನ್ನುವುದಕ್ಕೆ ತಾರ್ಕಾಣವಾಗಿ ಹಿಂದೂ ಸಂಸ್ಕೃತಿಯನ್ನು ಅನುಸರಿಸಿಯೆ ವಿದೇಶಿ ತಿಂಗಳುಗಳು ಹನ್ನೆರಡು ಇರುವವು. ಹಾಗೆಯೇ ವಾರದೊಳಗಿನ ದಿನಗಳು ಏಳೇ ಇರುವವು. ಇನ್ನೊಂದು ಮುಖ್ಯ ವಿಷಯವೇನೆಂದರೆ! ಆದಿತ್ಯವಾರ (ಭಾನುವಾರ), ಸೋಮವಾರ ಎನ್ನುವ ದಿನಗಳ ಹೆಸರುಗಳೆ ವಿದೇಶಿ ವಾರಗಳ ಹೆಸರುಗಳಲ್ಲಿಯೂ ಸಹ ಇರುವವು. ಆದಿತ್ಯನೆಂದರೆ ಸೂರ್ಯನು ಹಾಗೆಯೇ ಭಾನನು ಎಂದರೆ ಸೂರ್ಯನೆಂದೇ ಅರ್ಥ. ಸೂರ್ಯನ ದಿನವಾದ ಆದಿತ್ಯವಾರ (ಭಾನುವಾರ) ವನ್ನು ಇಂಗ್ಲೀಷ್ ಭಾಷೆಯಲ್ಲಿಯೂ ಸಹ ಸನ್‌ಡೇ ಎಂದು ಹೇಳಿಕೊಳ್ಳುವುದು, ಹಾಗೆಯೇ ಸೋಮ (ಚಂದ್ರ) ವಾರವನ್ನು ಮಂಡೇ ಎಂದು ಕರೆಯುವುದು ನಾವು ಗರ್ವಿಸಬೇಕಾದ ವಿಷಯ. ಈ ದಿನ ಮಂಡೇ ಎಂದು ಹೇಳಿಕೊಳ್ಳುವ ಹೆಸರು ಪೂರ್ವದಲ್ಲಿ ಮೂನ್‌ಡೇ ಎಂದು ಇತ್ತು. ಕಾಲಕ್ರಮವಾಗಿ ಇಂದೂ ಎಂಬ ಪದ ಹಿಂದೂವಾಗಿ ಬದಲಾದ ಹಾಗೆ Moon Day (ಮೂನ್‌ಡೇ) ಎನ್ನುವ ಪದದಲ್ಲಿ "ಯಮ್" ಪಕ್ಕದಲ್ಲಿನ ಎರಡು ಸೊನ್ನೆಗಳಲ್ಲಿ ('ಓ'ಗಳಲ್ಲಿ) ಒಂದು ಸೊನ್ನೆ ಗಾಳಿಗೆ ಹೋಗಿದೆ. ಕೊನೆಗೆ ಒಂದು ಸೊನ್ನೆ ಮಾತ್ರ ಉಳಿದಿದೆ. ಆದ್ದರಿಂದ ಮೂನ್‌ಡೆ ಸ್ವಲ್ಪ Mon Day (ಮನ್‌ಡೇ) ಯಾಗಿ ಬದಲಾಗಿ ಹೋಗಿದೆ. ವಾಸ್ತವವಾಗಿ ಸೋಮವಾರವನ್ನು ಮೂನ್‌ಡೇ ಎಂದೇ ಕರೆಯಬೇಕು. ಒಂದು ಸೊನ್ನೆ ಇದ್ದರು ಈಗಲೂ ಸಹ ಮೂನ್‌ಡೇ ಎಂದೇ ಕರೆಯಬೇಕು. ಆದರೆ ತಪ್ಪಾಗಿ ಮೂನ್‌ಡೇಯನ್ನು ಮನ್‌ಡೇ ಎಂದು ಕರೆಯುತ್ತಿದ್ದಾರೆ.

ಕಾಲಕ್ರಮದಲ್ಲಿ ನಡೆದ ಪರಿಣಾಮಗಳಿಂದ ಕೆಲವು ಪದಗಳನ್ನು ಬೇರೆಯಾಗಿ ನುಡಿಯುತ್ತಿದ್ದೇವೆ. ತಿಳಿಯದಿರುವಾಗ ಅರ್ಥವಿಲ್ಲದ ಪದವಾಗಿ ಹೇಳಿದರೂ, ತಿಳಿದಾಗ ಅರ್ಥವಿರುವ ಸರಿಯಾದ ಪದವಾಗಿ ನುಡಿಯಬೇಕೆಂದೂ, ಅದೇ ವಿಧಾನವನ್ನು ಅನುಸರಿಸಿ ಸೋಮವಾರವನ್ನು ಮೂನ್‌ಡೇ ಎಂದೂ, ಹಿಂದುವನ್ನು ಇಂದೂವಾಗಿ ನುಡಿಯುವುದೆ ನ್ಯಾಯವೆಂದು ತಿಳಿಸುತ್ತಿದ್ದೇವೆ.

ಇಲ್ಲಿಯವರೆಗು ಕನ್ನಡದಲ್ಲಿನ ಇಂದೂಗಳ ಸಂವತ್ಸರಗಳ ಹೆಸರುಗಳನ್ನು, ತಿಂಗಳುಗಳ (ಮಾಸಗಳ) ಹೆಸರುಗಳನ್ನೂ ತಿಳಿದುಕೊಂಡಿದ್ದೇವೆ. ಈಗ ವಾರದೊಳಗಿನ ಏಳು ದಿನಗಳ ಹೆಸರುಗಳನ್ನು ತಿಳಿದುಕೊಳ್ಳೋಣ. ವಾರದಲ್ಲಿ ಕ್ರಮವಾಗಿ ದಿನಗಳ ಹೆಸರುಗಳು ಹೀಗಿವೆ. 1) ಆದಿತ್ಯವಾರ (ಭಾನುವಾರ) 2) ಸೋಮವಾರ 3) ಮಂಗಳವಾರ 4) ಬುಧವಾರ 5) ಗುರುವಾರ 6) ಶುಕ್ರವಾರ 7) ಶನಿವಾರ. ಈ ಏಳು ಹೆಸರುಗಳು ಖಗೋಳದಲ್ಲಿನ ಗ್ರಹಗಳ ಹೆಸರುಗಳೆಂದು ತಿಳಿಯಬೇಕು. ಏಳು ಗ್ರಹಗಳು ಸಕಲ ಜೀವರಾಶಿಗಳ ಕರ್ಮಗಳನ್ನು ಪಾಲಿಸುತ್ತವೆ. ಅವರವರ ಕರ್ಮಗಳ ಪ್ರಕಾರ ಪ್ರಜೆಗಳಿಗೆ ಕಷ್ಟ ಸುಖಗಳನ್ನು ಬರುವಹಾಗೆ ಮಾಡುತ್ತಿವೆ. ಆದ್ದರಿಂದ ಈ ಏಳು ಗ್ರಹಗಳು ಎಲ್ಲ ದೇಶಗಳೊಳಗಿನ ಪ್ರಜೆಗಳಿಗೆ ಸಂಬಂಧಿಸಿವೆ. ಈ ಗ್ರಹಗಳ ವಿಷಯವು ಇತರ ದೇಶದವರಿಗೂ ಸಹ ತಿಳಿದಿದೆ. ಏಳು ಗ್ರಹಗಳಲ್ಲಿ ನಾಯಕನಾದ ಸೂರ್ಯನ ದಿನದಿಂದಲೇ ಅಂದರೆ ಸನ್‌ಡೇ (Sun Day) ಯಿಂದಲೇ ವಾರ ಪ್ರಾರಂಭವಾಗುತ್ತದೆ. ಎಲ್ಲರಿಗೂ ತಿಳಿದಹಾಗೆ ಎಲ್ಲ ದೇಶಗಳಲ್ಲಿ ಸನ್‌ಡೇ, ಮೂನ್‌ಡೇ ಮೊದಲನೆಯದಿನ, ಎರಡನೆಯ ದಿನಗಳಾಗಿ ಇವೆ. ಇದನ್ನನುಸರಿಸಿ ಇಂದೂ (ಹಿಂದೂ) ಸಂಸ್ಕೃತಿ ಪ್ರಪಂಚ ವ್ಯಾಪ್ತವಾಗಿ ಇದೆಯೆಂದು ಹೇಳಬಹುದು. ಪ್ರಪಂಚ ವ್ಯಾಪ್ತವಾಗಿ ಸಂವತ್ಸರ(ವರ್ಷ)ದಲ್ಲಿ ಹನ್ನೆರಡು ತಿಂಗಳುಗಳಿರುವುದೂ, ವಾರದಲ್ಲಿ ಏಳು ದಿನಗಳಿರುವುದೂ, ಆದಿತ್ಯವಾರದಿಂದ ವಾರ ಆರಂಭ ವಾಗುವುದೂ, ಎಲ್ಲರಿಗು ತಿಳಿದಹಾಗೆ ಸೂರ್ಯಚಂದ್ರ ದಿನಗಳು ಪಕ್ಕಪಕ್ಕದಲ್ಲೆ ಇರುವುದನ್ನು ನೋಡಿದರೆ, ಹಿಂದಿನ ಹಿಂದೂ (ಇಂದೂ) ಸಂಸ್ಕೃತಿ ಪ್ರಪಂಚ

ವ್ಯಾಪ್ತವಾಗಿ ಇರುತ್ತಿತ್ತೆಂದು ಅರ್ಥವಾಗುತ್ತಿದೆ. ಈಗಿನ ಕಾಲದಲ್ಲಿ ಹಿಂದೂಗಳಿಗೆ ಇಂದೂ ಸಂಸ್ಕೃತಿ ಎಂದರೆ ಏನೋ, ಅದರ ಅರ್ಥವೇನೋ ಸಹ ತಿಳಿದಿಲ್ಲ. ಇಂದೂ (ಹಿಂದೂ) ಸಂಸ್ಕೃತಿ ಎಂಬ ಮಾತನ್ನೇ ಕೇಳದ ಹಿಂದೂಗಳು ಎಷ್ಟೋ ಜನ ಇದ್ದಾರೆ. ಅಂತಹವರು ಇಂದೂ ಸಂಸ್ಕೃತಿ ಎಂದರೆ ಏನು ಎಂದು ಕೇಳಬಹುದು. ಅವರಿಗೆ ನಾವು ಹೇಳುವ ಸಮಾಧಾನವೇನೆಂದರೆ!

ಹಿಂದೂ ಎಂಬ ಶಬ್ದವು ಇಂದೂ ಪದವಾಗಿ ಹೇಳಿಕೊಂಡಾಗಲೇ ಹಿಂದುಗಳಿಗೆ ತಮ್ಮ ಸಂಸ್ಕೃತಿಯ ಬಗ್ಗೆ ತಿಳಿಯುತ್ತದೆ. ಸಂಸ್ಕೃತಿಯೆ ತಿಳಿಯದಿದ್ದಾಗ ಸಂಪ್ರದಾಯಗಳು ಮೊದಲಿಗೇ ತಿಳಿಯದೆ ಹೋಗುತ್ತವೆ. ಆದ್ದರಿಂದ ನಮಗೆ ಈಗ ನಮ್ಮ ಸಂಸ್ಕೃತಿಯನ್ನು ಕುರಿತು ತಿಳಿಯಬೇಕೆಂದರೆ, ನಾವು ಈಗ ಪೂರ್ವದ ಸ್ಥಿತಿಯೊಳಗೆ ಹೋಗಿ, **ಇಂದೂ** ಎಂಬ ಪದವನ್ನೆ ಉಪಯೋಗಿಸಿ ಹೇಳಿಕೊಳ್ಳ ಬೇಕು. ಇಂದೂ ಎಂದರೆ ಜ್ಞಾನ ಎಂದು ಅರ್ಥ. ಜ್ಞಾನದಲ್ಲಿ ಪ್ರಪಂಚ ಜ್ಞಾನ ಒಂದು, ಪರಮಾತ್ಮ ಜ್ಞಾನ ಮತ್ತೊಂದು ಇವೆ. ಈ ಎರಡರಲ್ಲಿ ಪರಮಾತ್ಮ ಜ್ಞಾನಕ್ಕೇ ಪ್ರತ್ಯೇಕಿಸಿ ಇಂದೂ ಎಂಬ ಪದವನ್ನು ಬಳಸುತ್ತೇವೆ. ಇಂದು ಎಂದರೆ ಚಂದ್ರನೆಂದು ತಿಳಿದರೂ, ಇಂದುವಿನಿಂದ ಹುಟ್ಟಿದ ಶಬ್ದ ಇಂದೂ. ಜ್ಯೋತಿಷ್ಯ ಶಾಸ್ತ್ರದಲ್ಲಿ ಜ್ಞಾನಕ್ಕೆ ಅಧಿಪತಿ ಚಂದ್ರನು ಆದಾಗ, ಪ್ರಪಂಚ ಜ್ಞಾನಕ್ಕೆ ಚಂದ್ರ ಎಂಬ ಹೆಸರಿನಿಂದ ಚಂದೂ ಎಂದೂ, ದೈವಜ್ಞಾನಕ್ಕೆ ಇಂದುವು ಎಂಬ ಹೆಸರಿನಿಂದ ಇಂದೂ ಎಂದೂ ಕರೆಯುತ್ತಿದ್ದರು. ಆದ್ದರಿಂದ **ದೈವಜ್ಞಾನ ಇರುವವನನ್ನು ಇಂದೂ ಎಂದು, ಪ್ರಪಂಚ ಜ್ಞಾನಇರುವವನನ್ನು ಚಂದೂ** ಎಂದು ಹೇಳುತ್ತಿದ್ದೇವೆ. ಈ ಮಾತು ಸತ್ಯವೆನ್ನುವುದಕ್ಕೆ ಒಂದು ಚಿಕ್ಕ ಆಧಾರವಿದೆ. ಮದುವೆ ಮಾತುಕತೆಗೆ ಹೋದಾಗ ಮದುಮಗ ಮದುಮಗಳನ್ನು ನೋಡುವುದು, ನೋಡಿದ ನಂತರ ಹುಡುಗಿ ಒಪ್ಪಿಗೆಯಾಗಿದೆಯೆಂದೋ, ಒಪ್ಪಿಗೆಯಾಗಿಲ್ಲವೆಂದೋ ಹೇಳುವುದು ನಡೆಯುತ್ತಿರುತ್ತದೆ. ಸರ್ವಸಾಧಾರಣವಾಗಿ ಹುಡುಗಿ ತನಗೆ ಅಂದವಾಗಿ ಕಾಣಿಸದೆ ಹೋದರೆ ಹುಡುಗಿ ಒಪ್ಪಿಗೆಯಾಗಿಲ್ಲವೆಂದು, ಹುಡುಗಿ ಅಂದವಾಗಿ ಕಾಣಿಸಿದರೆ ಒಪ್ಪಿಗೆಯಾಗಿದೆಯೆಂದು ಹುಡುಗಿಯನ್ನು ಮಾಡಿಕೊಳ್ಳುವ

ಯುವಕನು ಹೇಳುವನು. ಹುಡುಗಿ ಅಂದವಾಗಿಲ್ಲದೆ ಹೋದರೂ, ಹುಡುಗಿ ಒಳ್ಳೆಯ ತಿಳಿವಳಿಕೆಯುಳ್ಳವಳಾದರೆ, ಹುಡುಗಿಗೆ ಅಂದವು ಇಲ್ಲದೆ ಹೋದರು, ಚಂದವಿದೆ ಎಂದು ತಮ್ಮ ಹಿರಿಯರು ಹೇಳಿದರೆ, ಹುಡುಗಿಗೆ ಇರುವ ಚಂದವನ್ನು ಅನುಸರಿಸಿ ಹುಡುಗ ಮಾಡಿಕೊಳ್ಳುತ್ತೇನೆಂದು ಒಪ್ಪಿಕೊಳ್ಳುತ್ತಿದ್ದನು. ಅಂದವಿದ್ದು ಚಂದವಿಲ್ಲದೆಹೋದರೆ ಏನು ಪ್ರಯೋಜನ ಇಲ್ಲವೆಂದು, ಚಂದ (ತಿಳುವಳಿಕೆ) ಇದ್ದು ಅಂದ ಇಲ್ಲದೆ ಹೋದರೂ ಪರವಾಗಿಲ್ಲವೆಂದು, ಜೀವನಕ್ಕೆ ಅಂದಕ್ಕಿಂತ ಮುಖ್ಯ ತಿಳುವಳಿಕೆ (ಚಂದ) ಎಂದು ಪೂರ್ವದಲ್ಲಿ ಹೇಳುತ್ತಿದ್ದರು. ಪ್ರಸ್ತುತ ಕಾಲದಲ್ಲಿ ಚಂದ ಎಂದರೆ ಏನೋ ಯಾರಿಗೂ ತಿಳಿಯದೆ ಹೋಗಿದೆ. ಪೂರ್ವದಲ್ಲಿ ಚಂದೂ ಎನ್ನುವ ಹೆಸರುಗಳು ಕೆಲವರಿಗೆ, ಇಂದೂ ಎನ್ನುವ ಹೆಸರುಗಳು ಕೆಲವರಿಗೆ ಇಡುತ್ತಿದ್ದರು. ಈಗಿನ ಕಾಲದಲ್ಲಿ ಸಹ ಚಂದೂ ಎಂದು ಗಂಡು ಮಕ್ಕಳಿಗೂ, ಇಂದುಮತಿ ಎಂದು, ಇಂದೂ ಎಂದು ಹೆಣ್ಣುಮಕ್ಕಳಿಗೂ ಹೆಸರುಗಳಿರುವುದು ಅಲ್ಲಲ್ಲಿ ನೋಡುತ್ತಲೇ ಇದ್ದೇವೆ. ಇಂದುಮತಿ ಎಂದರೆ ದೈವ ಜ್ಞಾನ ಇರುವುದೆಂದು ಅರ್ಥ. ಎಲ್ಲಿಯಾದರೂ ಇಂದುಮತಿ ಎಂದು ಹೆಸರಿರುತ್ತದೆಯೇ ಹೊರತು, ಹಿಂದುಮತಿ ಎಂದು ಹೆಸರಿರುವುದಿಲ್ಲ. ಹಿಂದು ಎನ್ನುವುದು ಅರ್ಥವಿಲ್ಲದ ಪದ. ಹಾಗೆ ಎಲ್ಲಿಯಾದರೂ ದೈವ ಜ್ಞಾನದಲ್ಲಿ ಧರ್ಮವಿರುತ್ತದೆ, ಆದ್ದರಿಂದ ಇಂದೂ ಧರ್ಮವೆಂದು ದೈವಜ್ಞಾನವನ್ನು ಹೇಳಬಹುದು. ಆದರೆ ಹಾಗಲ್ಲದೆ ಹಿಂದೂ ಧರ್ಮವೆಂದು ಹೇಳಿದರೆ ಅದು ಅರ್ಥವಿಲ್ಲದ ಧರ್ಮವಾಗುತ್ತದೆ. ಧರ್ಮಗಳು ಅಧರ್ಮಗಳಾಗಿ ಬದಲಾ ಗುತ್ತವೆಂದು ಗೀತೆಯಲ್ಲಿ ಹೇಳಿದಹಾಗೆ ಪ್ರಸ್ತುತ ಇಂದೂ ಎಂಬ ಪದವು ಹಿಂದೂ ಎಂಬ ಪದವಾಗಿ ಬದಲಾಗಿದೆ. ನಾವು ಬಹಳಸಲ ಯಥಾರ್ಥವು ಇದು ಎಂದು ಹೇಳಿದರೂ ಕೇಳದ ಸ್ಥಿತಿಯಲ್ಲಿ ಹಿಂದುಗಳಿದ್ದಾರೆ. ನಾವು ಪೂರ್ವದಲ್ಲಿ ದೈವಜ್ಞಾನವಿದ್ದ ಇಂದೂಗಳೆಂದು, ಆದ್ದರಿಂದ ನಮ್ಮ ದೇಶಕ್ಕೆ ಪೂರ್ವದಲ್ಲಿಯೇ ಇಂದೂ ದೇಶವೆಂಬ ಹೆಸರು ಇತ್ತೆಂದು, ಇಂದೂ ದೇಶದಲ್ಲಿರುವವರೆಲ್ಲರೂ ಇಂದೂಗಳೇ ಎಂದು, ಕಾಲಗಮನದಲ್ಲಿ ಆಂಗ್ಲರ ಪರಿಪಾಲನೆಯ ಸಮಯದಲ್ಲಿ ಅವರು ಬಂದು ಬಾರದ ಭಾಷೆಯಿಂದ ನಮ್ಮನ್ನು

ಹಿಂದೂಗಳೆನ್ನುವುದು ನಡೆದಿದೆಯೆಂದು, ಆಗಿನಿಂದ ನಮ್ಮ ಹಿರಿಮೆಯನ್ನು ನಾವು ಮರೆತುಹೋಗಿ, ನಮ್ಮ ಚರಿತ್ರೆಯನ್ನು ನಾವು ತಿಳಿಯದವರಾಗಿ, ಮಧ್ಯದಲ್ಲಿ ನಡೆದ ಬದಲಾವಣೆಯನ್ನು ಗ್ರಹಿಸದೆ ಹೋಗಿದ್ದೇವೆಂದು ಹೇಳಿದರೂ ಕೇಳದವರಿದ್ದಾರೆ. ಹಾಗೆ ಕೇಳದೆ ಹೋಗುವುದಲ್ಲದೆ ಹಿಂದೂ ಎಂಬ ಪದವು ಸಿಂಧೂ ಎಂಬ ಪದದಿಂದ ಬದಲಾವಣೆಯಾಗಿದೆಯೆಂದು, ಸಿಂಧೂನದಿ ನಮ್ಮ ದೇಶದಲ್ಲಿ ಹರಿಯುತ್ತಿರುವುದರಿಂದ ಸಿಂಧೂ ಎಂಬ ಹೆಸರಿನ ಬದುಲು ಹಿಂದೂ ಎನ್ನುವ ಹೆಸರು ಬಂದಿದೆಯೆಂದು ಕೆಲವರು, ನಮ್ಮದು ಸಿಂಧೂನದಿ ಪ್ರಾಂತ್ಯದ ನಾಗರಿಕತೆ ಆಗಿರುವುದರಿಂದ ನಾವು ಹಿಂದೂಗಳೆಂದು ಕೆಲವರು ಹೇಳುತ್ತಿದ್ದಾರೆ. ಆಗಿರುವಾಗ ಸಿಂಧೂನದಿ, ಸಿಂಧೂ ನಾಗರಿಕತೆಯೆಂದಾಗಲಿ ತಿಳಿದಾಗ ನಾವು ಹಿಂದೂಗಳು ಅಲ್ಲ ಸಿಂಧೂಗಳೆಂದು ಹೇಳಿಕೊಳ್ಳಬಹುದು ಅಲ್ಲವೆ! ಎಂದು ನಾವು ಕೇಳುತ್ತಿದ್ದೇವೆ.

ವಿಷಯವು ತಿಳಿಯದವರಿಗೂ ಹಿಂದೂಗಳೆಂದು ಕರೆದುಕೊಂಡವರು ಹಿಂದುವು ಎನ್ನುವುದಕ್ಕೆ ಕಾರಣ ಸಿಂಧೂನದಿ ಎಂದಾಗಲಿ, ಸಿಂಧೂ ನಾಗರಿಕತೆಯೆಂದಾಗಲಿ ತಿಳಿದಾಗ, ಹಿಂದೂ ಎಂಬ ಅರ್ಥವಿಲ್ಲದ ಪದವನ್ನು ಬಿಟ್ಟು ಆಧಾರವಾದ ಅರ್ಥದಿಂದ ನಾವು ಸಿಂಧುಗಳೆಂದು ಹೇಳಿಕೊಳ್ಳಬಹುದು ಅಲ್ಲವೆ! ಸಿಂಧೂನದಿ ಪಾಕಿಸ್ಥಾನದಲ್ಲಿಯೂ ಸಹ ಹರಿಯುತ್ತಿದೆ. ಆದ್ದರಿಂದ ಆ ದೇಶದವರು ತಮ್ಮ ದೇಶದೊಳಗಿನ ಒಂದು ರಾಷ್ಟ್ರಕ್ಕೆ ಸಿಂಧೂರಾಷ್ಟ್ರವೆಂದು ಹೆಸರು ಇಟ್ಟುಕೊಂಡಿದ್ದಾರೆ. ನಮ್ಮ ದೇಶದಲ್ಲಿ ಸಿಂಧೂ ನದಿಗಿಂತ ದೊಡ್ಡದು, ಪವಿತ್ರವಾದದ್ದು ಆದ ಗಂಗಾನದಿ ಹರಿಯುತ್ತಿದೆ. ಅದಕ್ಕಿಂತ ದೊಡ್ಡದಾದ ಬ್ರಹ್ಮಪುತ್ರ ನದಿ ಹರಿಯುತ್ತಿದೆ. ಹಾಗಿರುವಾಗ ಮುಖ್ಯವಾದ ನದಿಗಳ ಹೆಸರುಗಳನ್ನು ಬಿಟ್ಟು ಸಿಂಧೂನದಿ ಹೆಸರನ್ನು ಆಧಾರವಾಗಿ ಇಟ್ಟುಕೊಳ್ಳುವುದೇನು ಎಂದು ಕೇಳಿದರೆ ಈದಿನ ನಾವು ಹಿಂದೂ ಧರ್ಮರಕ್ಷಕರೆಂದು ಎನ್ನುವ ವರಹತ್ತಿರವೇ ಸಮಾಧಾನವಿಲ್ಲ. ಸಿಂಧೂನದಿ ಹೆಸರಿಗಿಂತ ಗಂಗಾನದಿ ಹೆಸರು ಮುಖ್ಯ. ಏಕೆಂದರೆ ಸಿಂಧೂನದಿಗಿಂತ ಗಂಗಾನದಿಯೇ ನಮ್ಮ ದೇಶದಲ್ಲಿ ಹೆಚ್ಚಾಗಿ ಹರಿಯುತ್ತಿದೆ. ಹಾಗಿರುವಾಗ ಗಂಗಾದೇಶವೆಂದು ಹೆಸರು ಇಟ್ಟುಕೊಳ್ಳಬಹುದು

ಅಲ್ಲವೆ! ಎಂದು ನಾವು ಕೇಳಿದರೆ, ನಮ್ಮ ಪ್ರಶ್ನೆಗಳಿಗೆ ಉತ್ತರ ಹೇಳದೆ ನಮ್ಮನ್ನು ಪರಮತಸ್ಥರೆನ್ನುತ್ತಿದ್ದಾರೆ. ನಾವು ಸ್ವಚ್ಛವಾದ ಇಂದೂ ಧರ್ಮವನ್ನು ತಿಳಿಸಿದರೆ, ನಮ್ಮನ್ನು ಇಂದಿನ ಹಿಂದೂಗಳು ಕೆಲವರು ಇಂದೂಗಳೆಂದು ಗುರುತಿಸದೆ ಇತರ ಮತದವರೆಂದು ಹೇಳುವುದು ಎಷ್ಟು ವಿಚಿತ್ರವೋ ನೋಡಿ. ನಾವು ಭಗವಂತನು ಹೇಳಿದ ಭಗವದ್ಗೀತೆಯಲ್ಲಿನ ಪುರುಷೋತ್ತಮ ಪ್ರಾಪ್ತಿಯೋಗ ಎಂಬ ಅಧ್ಯಾಯದಲ್ಲಿ 16, 17 ಶ್ಲೋಕಗಳನ್ನು ಆಧಾರ ಮಾಡಿಕೊಂಡು ಕ್ಷರ, ಅಕ್ಷರ, ಪುರುಷೋತ್ತಮರೆನ್ನುವ ಮೂವರು ಪುರುಷರ ವಿಷಯವನ್ನು ಸಿದ್ಧಾಂತ ಸಹಿತವಾಗಿ, ಶಾಸ್ತ್ರಬದ್ಧವಾಗಿ ತ್ರೈತ ಸಿದ್ಧಾಂತವನ್ನು ಪ್ರಕಟಿಸಿದರೆ, ಹೇಳುವ ವಿಷಯವೇನೋ ಗ್ರಹಿಸದೆ ಕುರುಡರಾಗಿ ಹೋಗಿ, ತ್ರೈತವನ್ನು ಕ್ರೈಸ್ತ ಮತದಲ್ಲಿನ ತ್ರಿತ್ವವಾಗಿ ಹೋಲಿಸಿಕೊಂಡು ನಮ್ಮನ್ನು ಕ್ರೈಸ್ತವರೆಂದ ಕೆಲವರು ಹಿಂದುಗಳು ಇದ್ದಾರೆ. ನಾವು ಹಿಂದುಗಳು, ನೀವು ಇಂದೂಗಳು, ನಮ್ಮ ಮತ ಬೇರೆ, ನಿಮ್ಮ ಮತಬೇರೆ ಎನ್ನುವವರು ಸಹ ಇದ್ದಾರೆ. ಕುಂಟ ಮೊಲವನ್ನು ಹಿಡಿದು ಕೊಂಡಿರುವವನು, ತಾನು ಹಿಡಿದು ಕೊಂಡಿರುವುದು ಕುಂಟು ಮೊಲವನ್ನೆಂದು ತಿಳಿಯದೆ ಹೋಗುವುದಲ್ಲದೆ, ಮೊಲಗಳೆಲ್ಲವುಗಳಿಗೆ ಮೂರೇ ಕಾಲು ಗಳಿರುತ್ತವೆಂದು ಹೇಳುವುದು ತಪ್ಪೆಂದು ಅದು ಸತ್ಯವಲ್ಲವೆಂದು, ಮೊಲಗಳಿಗೆ ಮೂರು ಅಲ್ಲ ನಾಲ್ಕು ಕಾಲುಗಳಿರುತ್ತವೆ ಯೆಂದು ಹೇಳಿದರೂ ಕೇಳದವರಿದ್ದಾರೆ. ಅಂತಹವನಿಗೆ ಸತ್ಯವು ತಿಳಿಯಬೇಕೆಂದರೆ ಅವನಿಗೆ ನಾಲ್ಕು ಕಾಲಿನ ಮೊಲಗಳೆರಡನ್ನು ತಂದು ತೋರಿಸಬೇಕು. ಒಂದನ್ನು ತೋರಿಸಿದರೂ ಅವನು ಒಪ್ಪಿಕೊಳ್ಳುವುದಿಲ್ಲ. ಅದು ಒಂದು ನಾಲ್ಕು ಕಾಲುಗಳಿಂದ ತಪ್ಪಾಗಿ ಹುಟ್ಟಿದೆ ಎಂದೆನ್ನುತ್ತಾನೆ. ಆದ್ದರಿಂದ ಎರಡೂ ಮೊಲಗಳನ್ನು ತೋರಿಸುವ ಅವಶ್ಯವಿದೆ. ನಾವು ಹಾಗೆ ಎರಡು ಮೊಲಗಳನ್ನು ತೋರಿಸಿದಹಾಗೆ ಪೂರ್ವದ ಚರಿತ್ರೆಯನ್ನೂ, ಹೆಸರುಗಳಿಗೆ ಅರ್ಥವನ್ನು ಹೇಳಿದರೂ ಕೇಳದೆ ನೀನು ಹಿಂದುವೆ ಅಲ್ಲ ಇತರ ಮತದವನೆಂದು ಹಿಂದುಗಳು ಕೆಲವರನ್ನುವುದು ಹೇಗಿದೆಯೆಂದರೆ, ಎರಡು ಮೊಲಗಳನ್ನು ತಂದು ಇವುಗಳಿಗೆ ನಾಲ್ಕು ಕಾಲು ಇವೆಯೆಂದು ಸಾಕ್ಷಿ ಸಮೇತವಾಗಿ ತೋರಿಸಿದರೂ ಇವು ಮೊಲಗಳ ಜಾತಿಯೇ ಅಲ್ಲ, ಇತರ ಜಾತಿ ಜಂತುಗಳೆಂದು ಹೇಳಿದಂತಾಗಿದೆ.

ನಮಗೆ ಜ್ಞಾನವಿದೆಯೆಂದು ನಮಗಿಂತ ಮೀರಿದ ಜ್ಞಾನಿ ಇಲ್ಲವೆಂದು ಕೊಂಡು, ಮಾರ್ಗವನ್ನು ಹಿಡಿದುಕೊಳ್ಳದೆ, ಮತವನ್ನು ಹಿಡಿದುಕೊಂಡವರನ್ನು ಬಿಟ್ಟು, ಜ್ಞಾನವೇನೋ ತಿಳಿದುಕೊಳ್ಳಬೇಕೆಂದುಕೊಂಡ ಜಿಜ್ಞಾಸಿಗಳಿಗೆ ಹೇಳುವುದು ಒಳ್ಳೆಯದೆಂದುಕೊಂಡಿದ್ದೇವೆ. ನಮಗೆ ತಿಳಿಯದು, ತಿಳಿದು ಕೊಳ್ಳಬೇಕೆನ್ನುವ ಆಕಾಂಕ್ಷೆ ಇರುವವರಿಗೆ ನಮ್ಮ ರಚನೆಗಳು ಉಪಯೋಗ ಪಡುತ್ತವೆಂದು ತಿಳಿಸುತ್ತಿದ್ದೇವೆ. ಈಗ ಅಸಲು ವಿಷಯಕ್ಕೆ ಬಂದು ಇಂದೂ ಸಂಸ್ಕೃತಿಯನ್ನು ಕುರಿತು ಹೇಳಿಕೊಳ್ಳೋಣ. ಇಂದೂ ಸಂಸ್ಕೃತಿಯನ್ನು ಬೇರ್ಪಡಿಸಿ ನೋಡಿದರೆ ಇಂದೂ ಎನ್ನುವುದು ಪ್ರತ್ಯೇಕ ಪದವಾಗಿ ಇದೆ. ಸಂಸ್ಕೃತಿ ಎಂಬ ಪದವನ್ನು ಬೇರ್ಪಡಿಸಿದರೆ ಸಮ್+ಕೃತಿ ಎಂದು ಇದೆ. ಸಮ್ ಎಂದರೆ ಒಳ್ಳೆಯದು, ಕೃತಿ ಎಂದರೆ ಮಾಡಿರುವುದು ಎಂದು ಅರ್ಥ. ಈಗ ಇಂದೂ ಸಂಸ್ಕೃತಿ ಎಂದರೆ ದೈವ ಜ್ಞಾನದಿಂದ ಒಳ್ಳೆಯದಾಗಿ ಮಾಡಿರುವುದು ಎಂದು ಅರ್ಥ. ಇನ್ನೂ ವಿವರವಾಗಿ ಹೇಳಿಕೊಂಡರೆ ದೈವ ಜ್ಞಾನವನ್ನು ಅನುಸರಿಸಿ ನಿರ್ಣಯಿಸಿದ ಕೆಲಸ ಅಥವಾ ಪದ್ಧತಿ ಎಂದು ತಿಳಿಯುತ್ತಿದೆ. ನಿರ್ಣಯಿಸಿದ ಪದ್ದತಿಯನ್ನು ಅಥವಾ ಕೆಲಸ ಮಾಡುವುದನ್ನು ಸಾಂಪ್ರದಾಯ ಎಂದು ಅನ್ನುತ್ತೇವೆ. ಸಂಸ್ಕೃತಿಯಿಂದ ಸಾಂಪ್ರದಾಯ ಏರ್ಪಡುತ್ತಿದೆ. ಉದಾಹರಣೆಗೆ ದೇವಸ್ಥಾನ ದೊಳಗೆ ಹೋಗಿ ಪ್ರತಿಮೆಯ ಮುಂದೆ ಹೀಗೆ ಕರ್ಪೂರವನ್ನು ಬೆಳಗಿಸಬೇಕು, ಅದರಲ್ಲಿ ದೈವಜ್ಞಾನ ಸಂಬಂಧವಾಗಿ ನಿರ್ಣಯಿಸಿದ ಉದ್ದೇಶವಿದೆ ಎಂದು ತಿಳಿಸುವುದು ಇಂದೂ ಸಂಸ್ಕೃತಿ, ಅದನ್ನು ಆಚರಿಸುವುದು ಸಾಂಪ್ರದಾಯ. ಇಂತಹ ಸಂಸ್ಕೃತಿ ಸಾಂಪ್ರದಾಯಗಳು ಇಂದೂ ಪಥದಲ್ಲಿ ಎಷ್ಟೋ ಇವೆ. ಇಂದೂ ಎಂದರೆ ಜ್ಞಾನವನ್ನು ಹೊಂದಿದವನು, ದೈವಜ್ಞಾನಿ ಎಂದು ಹೇಳಬಹುದು. ದೈವಜ್ಞಾನ ಎಲ್ಲಿರುತ್ತದೋ ಅಲ್ಲಿ ಇಂದೂ ಎಂಬ ಪದವನ್ನು ಉಪಯೋಗಿಸಿ ಹೇಳಬಹುದು. ದೇವರ ಮೇಲೆ ವಿಶ್ವಾಸ ಇರುವವನನ್ನು ಇಸ್ಲಾಮ್‌ನಲ್ಲಿ "ಮುಸ್ಲೀಮ್" ಎನ್ನುವಂತೆ, ದೇವರ ಜ್ಞಾನ ಇರುವವನನ್ನು ದೈವಜ್ಞಾನಿ ಎನ್ನಬಹುದು. ಭಕ್ತಿ ಎಂದರೆ ವಿಶ್ವಾಸ ಎಂದರ್ಥ. ದೇವರ ಭಕ್ತಿ

ಇರುವವನನ್ನು ಮುಸ್ಲೀಮ್ ಎಂದರೆ, ದೇವರ ಜ್ಞಾನ ಇರುವವನಿಗೆ ಇಂದೂ ಎಂದು ಹೇಳಬಹುದು. ಇಲ್ಲಿ ಬೇರ್ಪಡಿಸಿ ಹೇಳಿದರೆ ಭಕ್ತಿ ಬೇರೆ, ಜ್ಞಾನ ಬೇರೆಯೆಂದು ಹೇಳಬಹುದು. **ದೇವರ ಮೇಲೆ ವಿಶ್ವಾಸ ಇರುವವನು ಯಾರಾದರೂ, ಯಾವ ದೇಶದವರಾದರೂ, ಯಾವ ಮತದವರಾದರೂ ಮುಸ್ಲಿಮ್ ಆಗುವನು. ಹಾಗೆಯೇ ದೇವರ ಜ್ಞಾನ ಇರುವವನು ಯಾರಾದರೂ, ಯಾವ ದೇಶದವರಾದರೂ, ಯಾವ ಮತದವರಾದರೂ ಇಂದೂವೇ ಆಗುವನು.** ಈ ಸೂತ್ರದ ಪ್ರಕಾರ ಮತಗಳನ್ನು ಪಕ್ಕಕ್ಕಿಟ್ಟು, ಮತಾತೀತವಾಗಿ ನೋಡಿದರೆ, ಇಂದೂ ಸಮಾಜದಲ್ಲಿ ಎಷ್ಟೋ ಮುಸ್ಲಿಮ್‌ರು ಇರುವರೆಂದು, ಹಾಗೆಯೇ ಇಸ್ಲಾಮ್ ಸಮಾಜದಲ್ಲಿಯೂ ಸಹ ಎಷ್ಟೋ ಇಂದೂಗಳು ಇರುವರೆಂದು ಹೇಳಬಹುದು.

ಇಂದೂ ಸಂಸ್ಕೃತಿ ಎನ್ನುವುದು ಸೃಷ್ಠಿ ಆರಂಭವಾದಾಗಲೇ ಹೇಳಲಾಗಿದೆ. ಜ್ಞಾನ ಸಂಸ್ಕೃತಿ ಎನ್ನುವುದು ದೇವರ ಜ್ಞಾನ ತಿಳಿದುಕೊಳ್ಳುವ ಪ್ರತಿ ಮನುಷ್ಯನಿಗೆ ಸಂಬಂಧವಿದೆ. ಇಂದೂ ಎನ್ನುವುದು ದೈವಜ್ಞಾನ. ಆದ್ದರಿಂದ ದೈವಜ್ಞಾನ ಇರುವವರೆಲ್ಲರನ್ನು ಇಂದೂಗಳೆ ಎನ್ನಬಹುದು. ಇಂದೂ ಎನ್ನುವುದು ಒಂದು ಮತವಲ್ಲ, ಪಥವೆಂದು, ದೈವಮಾರ್ಗವೆಂದು ಹೇಳಬಹುದು. ಬೈಬಲ್‌ನಲ್ಲಿ ದೇವರ ವಾಕ್ಯಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡು ಅದರಲ್ಲಿನ ಜ್ಞಾನವನ್ನು ತಿಳಿದುಕೊಂಡವನು ಜ್ಞಾನಿಯೇ! ಅಥವಾ ಇಂದುವೇ! ಹಾಗೇ ಭಗವದ್ಗೀತೆಯಲ್ಲಿನ ದೇವರ ಜ್ಞಾನವನ್ನು ತಿಳಿದುಕೊಂಡವನು ಜ್ಞಾನಿಯೇ ಆಗುವನು, ಅವನನ್ನು ಇಂದೂ ಎನ್ನಬಹುದು. ಒಂದು ವೇಳೆ ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ಜ್ಞಾನವನ್ನು ತಿಳಿಯದೆ ನಾನು ಇಂದೂ ಎಂದು ಅಥವಾ ಹಿಂದುವೆಂದು ಹೇಳಿಕೊಂಡರೆ ಅವನು ಇಂದೂ ಸಂಘದಲ್ಲಿ ನಾಯಕನಾದರೂ, ಇಂದೂಮತ ರಕ್ಷಕನೆಂದು ಹೆಸರು ಇಟ್ಟುಕೊಂಡರೂ, ಅವನು ವಾಸ್ತವವಾಗಿ ಇಂದೂ ಅಲ್ಲ. ಈ ದಿನ ಇಂದೂವಲ್ಲದ ಹಿಂದೂಗಳು ಬಹಳಜನ ಇದ್ದಾರೆಂದು ಹೇಳಬಹುದು. ಇದೇ ಸೂತ್ರದ ಪ್ರಕಾರ ಇಸ್ಲಾಮ್ ಸಮಾಜದಲ್ಲಿಯೂ ಸಹ ಕೆಲವರು ಜ್ಞಾನಿಗಳು ಇದ್ದಾರೆ, ಕೆಲವರು ವಿಶ್ವಾಸಿಗಳು ಇದ್ದಾರೆ. ಒಂದು ವಿಧವಾಗಿ ಕ್ರೈಸ್ತರಲ್ಲಿಯೂ,

ಇಸ್ಲಾಮ್‌ನಲ್ಲಿಯೂ ವಿಶ್ವಾಸಿಗಳು ಹೆಚ್ಚಾಗಿ ಇದ್ದಾರೆ. ಜ್ಞಾನಿಗಳು ಕಡಿಮೆ ಇದ್ದಾರೆ. ಈಗಿನ ಇಂದೂಸಮಾಜ (ಹಿಂದೂಸಮಾಜ) ದೊಳಗೆ ನೋಡಿದರೆ ಬಹಳಜನಕ್ಕೆ ದೇವರು ಒಬ್ಬನೇ ಎಂಬ ವಿಷಯ ತಿಳಿಯದಿರುವುದರಿಂದ, ಬಹು ದೇವತೆಗಳನ್ನು ಆರಾಧಿಸುವುದರಿಂದ, ದೇವರ ವಿಶ್ವಾಸಿಗರು ಇಲ್ಲ, ಹಾಗೆ ದೇವರ ಜ್ಞಾನ ತಿಳಿದವರು ಇಲ್ಲವೆಂದೇ ಹೇಳಬಹುದು. ನಾವು ಜ್ಞಾನಬೋಧಕರು, ಗುರುಗಳೆಂದು ಹೇಳಿಕೊಳ್ಳುವವರೆಲ್ಲರೂ, ವಿಧವಿಧವಾದ ಬೋಧನೆಗಳನ್ನು ಬೋಧಿಸುತ್ತಾ ನಮ್ಮ ಬೋಧನೆಗಳನ್ನು ಕೇಳಿದವರು, ಅನುಸರಿಸಿದವರು ದೇವರಾಗಿ ಹೋಗ ಬಲ್ಲನೆಂದು ಹೇಳುತ್ತಿದ್ದಾರೆ. ಅವರ ಬೋಧನೆಗಳನ್ನು ಅನುಸರಿಸುವವರು ನಾವು ಬದುಕಿರುವಾಗಲೇ ದೇವರಾಗಿಹೋಗಿದ್ದೇವೆಂದು ಹೇಳಿಕೊಳ್ಳುವುದನ್ನು ನೋಡಿದರೆ ದೇವರ ವಿಧಾನವಾಗಲಿ, ದೇವರ ಧರ್ಮವಾಗಲಿ ಅವರಿಗೆ ಸ್ವಲ್ಪವಾದರೂ ತಿಳಿದಿಲ್ಲವೆಂದು ಸ್ಪಷ್ಟವಾಗುತ್ತಿದೆ.

ನಾಮ, ರೂಪ, ಕ್ರಿಯಾರಹಿತನಾದ ದೇವರನ್ನು ತಿಳಿಯದೆ ನಾಮ, ರೂಪ, ಕ್ರಿಯೆಗಳಿರುವ ಮನುಷ್ಯರು ನಾವು ದೇವರಾಗಿಹೋಗಿದ್ದೇವೆಂದರೆ, ಸೂತ್ರದ ಪ್ರಕಾರ ಅವರು ವಿಶ್ವಾಸಿಗಳಾಗಿಯಾದರೂ, ಜ್ಞಾನಿಗಳಾಗಿಯಾದರೂ ಲೆಕ್ಕದಲ್ಲಿರುವುದಿಲ್ಲ. ಎಲ್ಲ ಮತಗಳು ದೇವರ ಮಾರ್ಗವನ್ನು ತೋರಿಸುತ್ತಿವೆ. ಎಲ್ಲ ಮತಗಳು ಎಲ್ಲರಿಗೂ ಒಂದೇ ದೇವರೆಂದು ತಿಳಿಸುತ್ತಿವೆ. ಪರಮ ಭಗವದ್ಗೀತೆ ಯಲ್ಲಾಗಲಿ, ಪರಿಶುದ್ಧ ಬೈಬಲ್‌ನಲ್ಲಾಗಲಿ, ಪವಿತ್ರ ಖುರಾನ್‌ನಲ್ಲಾಗಲಿ ಒಂದೇ ದೇವರನ್ನು ಆರಾಧಿಸು ಎಂದು, ಎಲ್ಲರಿಗೂ ಒಬ್ಬನೇ ಸೃಷ್ಠಿಕರ್ತ ಎಂದು ಜ್ಞಾನವಿದೆ. ಆ ಸಂದೇಶಗಳ ಪ್ರಕಾರ ನಡೆದುಕೊಳ್ಳುವವನು ಯಾರಾದರೂ ಜ್ಞಾನಿ ಆದ ಹಾಗೆ! ಅವನನ್ನೇ ಇಂದೂ ಎನ್ನಬಹುದು. ದೇವರ ಸಮಾಚಾರವನ್ನು ತಿಳಿಸುವ ಗ್ರಂಥಗಳಲ್ಲಿನ ದೈವ ಜ್ಞಾನದ ಪ್ರಕಾರ ಅನುಸರಿಸಿದವನು, ಮೂಲ ಗ್ರಂಥದೊಳಗಿನ ಮೂಲ ಸೂತ್ರಗಳನ್ನು ತಿಳಿಯದವನು ಎಂದಿಗೂ ಜ್ಞಾನಿ ಆಗಲಾರನು, ಅವನನ್ನು ಇಂದೂ ಎನ್ನುವುದಕ್ಕೆ ಅವಕಾಶವಿಲ್ಲ. ಮತ್ತೊಂದು

ಮುಖ್ಯ ವಿಷಯವೇನೆಂದರೆ! ಆದಿಯಲ್ಲಿಯೇ ಹುಟ್ಟಿದ ಪರಮ ಭಗವದ್ಗೀತೆ ಯಲ್ಲಾಗಲಿ, ನಂತರ ಬಂದ ಪರಿಶುದ್ದ ಬೈಬಲ್‌ನಲ್ಲಾಗಲಿ, ಆನಂತರ ಬಂದ ಪವಿತ್ರ ಖುರಾನ್‌ನಲ್ಲಾಗಲಿ ಮತ ಎಂಬ ಹೆಸರಿಲ್ಲ. ಮೂರು ಮೂಲ ಗ್ರಂಥಗಳಲ್ಲಿ ಸರ್ವಮಾನವರಿಗು ಹೇಳುತ್ತಿದ್ದೇವೆಂದೇ ಇದೆ. ಆದರೆ ಮತ ಎಂಬ ಹೆಸರಿಲ್ಲ. ಮತ ಎಂಬ ಹೆಸರು ಇಲ್ಲದೆಹೋದರೆ, ನಮ್ಮದು ಇಂತಹ ಮತವೆಂದು ಆಯಾ ಮತಸ್ಥರು ಏಕೆ ಹೇಳಿಕೊಳ್ಳುತ್ತಿದ್ದಾರೆಂದು ಯಾರಾದರೂ ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ!

ಆಟ, ಹಾಡು, ಕೆಲಸವಿಲ್ಲದ ಕೆಲಸಕ್ಕೆ ಬಾರದ (ಕೆಲಸಮಾಡದ)ವನು ದೇವರು. ಕೆಲಸ ಮಾಡದವನು (ಕೆಲಸಕ್ಕೆ ಬಾರದ) ದೇವರು ಸೃಷ್ಠಿ ಆದಿಯಲ್ಲಿಯೆ ಸೃಷ್ಠಿ ತಯಾರಾಗದ ಮುಂಚೆಯೇ ಕೆಲಸ ಮಾಡಿ ಸಮಸ್ತವನ್ನು ಸೃಷ್ಠಿಸಿರುವುದೇ ಅಲ್ಲದೆ, ನಂತರ ಬೇರೆಬೇರೆ ಕಾಲದಲ್ಲಿ ಬೇರೆಬೇರೆ ಪ್ರಾಂತಗಳಲ್ಲಿ, ಬೇರೆಬೇರೆ ವ್ಯಕ್ತಿಗಳ ಮುಖಾಂತರ, ಬೇರೆಬೇರೆ ವಿಧಗಳಾಗಿ ತನ್ನ (ದೇವರ) ಜ್ಞಾನವನ್ನು ಬೋಧಿಸುವ ಹಾಗೆ ನಿರ್ಣಯಿಸಿದ್ದಾನೆ. ಆತನು (ದೇವರು) ನಿರ್ಣಯಿಸಿದ ಹಾಗೆಯೇ ಬೇರೆಬೇರೆ ಕಾಲಗಳಲ್ಲಿ, ಬೇರೆಬೇರೆ ಪ್ರಾಂತಗಳಲ್ಲಿ, ಬೇರೆಬೇರೆ ವ್ಯಕ್ತಿಗಳ ಮುಖಾಂತರ ದೈವಜ್ಞಾನ ಬೋಧಿಸಲಾಗಿದೆ. ಆದರೆ ಬೇರೆಬೇರೆ ವಿಧಗಳಾಗಿ ಬೋಧಿಸಲಾಗಿದೆ. ಬೇರೆ ಬೇರೆ ವಿಧಗಳಾಗಿ ಎಂದರೆ ದೈವ ಜ್ಞಾನದಲ್ಲಿಯೇ ಬೇರೆ ಪರಿಮಾಣದಲ್ಲಿ ಎಂದು ಗ್ರಹಿಸಬೇಕು. ಒಂದೇ ಜ್ಞಾನವನ್ನೇ ಭಗವದ್ಗೀತೆಯಲ್ಲಿ ಹೆಚ್ಚಿನ ಪರಿಮಾಣದಲ್ಲಿ ಬೋಧಿಸಲಾಗಿದೆ. ಅದೇ ಜ್ಞಾನವನ್ನೇ ಬೈಬಲ್‌ನಲ್ಲಿ ಸಂಪೂರ್ಣವಾಗಿ ಬೋಧಿಸಿದರೂ, ಗೀತೆಗಿಂತ ಪರಿಮಾಣ ಕಡಿಮೆ ಇದೆ. ಹಾಗೆಯೇ ಖುರಾನ್ ಗ್ರಂಥದಲ್ಲಿ ಗೀತೆಯಲ್ಲಿ, ಬೈಬಲ್‌ನಲ್ಲಿ ಬೋಧಿಸಿದ ಸಾರಾಂಶ ಜ್ಞಾನವನ್ನೇ ಹೇಳಿದರೂ ಪರಿಮಾಣ ಕಡಿಮೆಯಾಗಿದೆ. ನೀವು ಅರ್ಥಮಾಡಿಕೊಳ್ಳಲು ಒಂದು ಉದಾಹರಣೆ ಹೇಳುತ್ತಿದ್ದೇನೆ ನೋಡಿರಿ. ಒಂದು ತೊಲ (ಹತ್ತು ಗ್ರಾಂ) ಬಂಗಾರವನ್ನು ಉಪಯೋಗಿಸಿ ಒಬ್ಬ ಅಕ್ಕಸಾಲಿಗನು

ಒಂದು ಅಗಲವಾದ ಬಿಲ್ಲೆಯನ್ನು ತಯಾರುಮಾಡಿ, ಆ ಬಿಲ್ಲೆ ಮೇಲೆ ಒಂದು ಗೊಂಬೆಯನ್ನು ಮುದ್ರಿಸಿದ್ದಾನೆ. ನಂತರ ಸ್ವಲ್ಪಕಾಲಕ್ಕೆ ಮತ್ತೊಬ್ಬ ಅಕ್ಕಸಾಲಿಗ, ಮತ್ತೊಂದು ಊರಿನಲ್ಲಿ ಒಂದು ತೊಲ ಬಂಗಾರದಿಂದ ಒಂದು ಬಿಲ್ಲೆಯನ್ನು ತಯಾರುಮಾಡಿ ಮೊದಲ ಬಿಲ್ಲೆಯ ಮೇಲಿದ್ದ ಗೊಂಬೆಯನ್ನೇ ಮುದ್ರಿಸುತ್ತಾನೆ. ಮೊದಲು ತಯಾರಾದ ಬಿಲ್ಲೆಗು ನಂತರ ತಯಾರಾದ ಬಿಲ್ಲೆಗು ವಿಸ್ತೀರ್ಣದಲ್ಲಿ ಮಾತ್ರ ಸ್ವಲ್ಪ ಕಡಿಮೆ ಇದೆ. ಆದರೆ ಬಂಗಾರ ಒಂದು ತೊಲವೆ, ಅದರಮೇಲೆ ಗೊಂಬೆ ಒಂದೇ, ಮೊದಲ ಬಿಲ್ಲೆಯನ್ನು ನೋಡಿದವನು ಎರಡನೆಯ ಬಿಲ್ಲೆಯನ್ನು ನೋಡಿದರೆ ಅವುಗಳ ಮೇಲೆ ಒಂದೇ ಗೊಂಬೆ ಇರುವುದನ್ನು ಗ್ರಹಿಸಬಲ್ಲನು. ನಂತರ ಸ್ವಲ್ಪ ಕಾಲಕ್ಕೆ ಅದೇ ತೊಲ ಬಂಗಾರದಿಂದ, ಪರಿಮಾಣದಲ್ಲಿ ಎರಡನೆಯದಕ್ಕಿಂತ ಚಿಕ್ಕದಾಗಿರುವ ಬಿಲ್ಲೆಯನ್ನು ಮತ್ತೊಬ್ಬ ಅಕ್ಕಸಾಲಿಗ ತಯಾರುಮಾಡಿ, ಆ ಚಿಕ್ಕ ಬಿಲ್ಲೆಯಮೇಲೆ ಮೊದಲು ಎರಡು ಬಿಲ್ಲೆಗಳ ಮೇಲೆ ಇದ್ದ ಗೊಂಬೆಗಳನ್ನೇ ಮುದ್ರಿಸಿದ್ದಾನೆ. ತಿಳುವಳಿಕೆ ಇರುವವರು ಯಾರಾದರೂ ಮೂರು ಬಿಲ್ಲೆಗಳನ್ನು ನೋಡಿದರೆ ಪರಿಮಾಣದಲ್ಲಿ ವ್ಯತ್ಯಾಸವನ್ನು ಹೊರತು ಒಂದೇ ಗೊಂಬೆಯನ್ನು ತೋರಿಸುತ್ತಿವೆಯೆಂದು, ಎಲ್ಲ ಒಂದೇ ತೂಕವಿರುವ ಬಂಗಾರದ ಬಿಲ್ಲೆಗಳೆಂದು ತಿಳಿದುಹೋಗಿದೆ. ಹಾಗೆಯೇ ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಒಂದೇ ದೇವರನ್ನು ಕುರಿತು ಹೇಳಲಾಗಿದೆ. ಆದರೆ ಭಗವದ್ಗೀತೆ ಶೇಕಡ ನೂರರಷ್ಟು ವಿಶಾಲವಾದ ಜ್ಞಾನವನ್ನು ತೋರಿಸಿದೆ. ಹಾಗೆಯೇ ಬೈಬಲ್ ಶೇಕಡ ಅರವತ್ತರಷ್ಟು ಜ್ಞಾನವನ್ನು ತಿಳಿಸಿದೆ. ನಂತರ ಪವಿತ್ರ ಖುರಾನ್ ಗ್ರಂಥ ಕೇವಲ ಶೇಕಡ ಐದರಷ್ಟು ಜ್ಞಾನವನ್ನು ತಿಳಿಸಿದೆ. ಆದರೆ ಸಾರಾಂಶದಲ್ಲಾಗಲಿ, ದೇವರ ವಿಷಯದಲ್ಲಾಗಲಿ, ಮೂರು ಸಮಾನ ವಾಗಿವೆ. ಇದನ್ನು ಅನುಸರಿಸಿ ಗೀತೆ ತೆಳುವಾಗಿ, ಬೈಬಲ್ ಗೀತೆಗಿಂತ ಸ್ವಲ್ಪ ಮಂದವಾಗಿ, ಖುರಾನ್ ಗೀತೆ, ಬೈಬಲ್‌ಗಿಂತ ಮತ್ತೆ ಸ್ವಲ್ಪ ಮಂದವಾಗಿ ಇರುವುದರಿಂದ, ಮೂರು ಸಮಾನವಾದ ತೂಕ ಹೊಂದಿರುವವೆಂದು, ತೂಕದಲ್ಲಿ ಮಾತ್ರ ಯಾವುದೇ ವ್ಯತ್ಯಾಸ ಇಲ್ಲವೆಂದು ಗ್ರಹಿಸಬೇಕು.

ಈ ವಿಧವಾಗಿ ದೇವರು ತನ್ನ ಗ್ರಂಥಗಳಲ್ಲಿ ತನ್ನ ಜ್ಞಾನವನ್ನು ಬೋಧಿಸಿದ್ದಾನೆ. ಮೂರು ಮೂಲ ಗ್ರಂಥಗಳಲ್ಲಿ ಒಂದೇ ದೇವರ ಜ್ಞಾನವನ್ನು ಹೇಳುತ್ತಾ, ಆ ಮೂಲ ಗ್ರಂಥಗಳಲ್ಲಿ ಸರ್ವಮಾನವರಿಗೂ ಒದಗಿಸುವ ಸಮಾಚಾರಗಳೇ ಹೇಳಿದ್ದಾರೆ. ಆದರೆ ಇಂತದ್ದೇ ಮತವೆಂದು, ಇಂತದ್ದೇ ಮತ ಪ್ರಜೆಗಳಿಗೆಂದು ಎಲ್ಲಿಯೂ ಹೇಳಿಲ್ಲ. ಮೂರು ಮೂಲ ಗ್ರಂಥಗಳಲ್ಲಿ ದೇವರ ಮಾರ್ಗವನ್ನೇ ತಿಳಿಸಿದ್ದಾರೆ. ಆದರೆ ಎಲ್ಲಿಯೂ ಯಾರಿಗೂ ಮತವನ್ನು ಕುರಿತು ಹೇಳಲಿಲ್ಲ. ದೇವರಕಡೆಗೆ ಹೋಗುವ ಪಥವನ್ನು (ಮಾರ್ಗವನ್ನು) ಕುರಿತೆ ಹೇಳಿದ್ದಾರೆ. ಈಗ ಕೆಲವರು ನನ್ನನ್ನು ಒಂದು ಪ್ರಶ್ನೆ ಹೀಗೆ ಕೇಳಬಹುದು. “ನೀವು ಹೇಳಿರುವುದು ಚೆನ್ನಾಗಿಯೇ ಇದೆ. ಆದರೆ ಹಿಂದೂ ಮತ, ಕ್ರೈಸ್ತಮತ, ಇಸ್ಲಾಮ್ ಮತವೆಂದು ಎಲ್ಲರೂ ಅವರವರ ಮತಗಳನ್ನು ಕುರಿತು ಹೇಳಿ ಕೊಳ್ಳುತ್ತಿದ್ದಾರೆ ಅಲ್ಲವೆ! ಹಿಂದೂಗಳು ಬೊಟ್ಟು ಇಟ್ಟುಕೊಂಡರೆ ಉಳಿದ ಎರಡು ಮತದವರು ಇಟ್ಟುಕೊಳ್ಳುವುದಿಲ್ಲ ಅಲ್ಲವೆ! ಹಾಗೆ ಇಸ್ಲಾಮ್ ಮತದವರು ಲುಂಗಿಯಾಗಲಿ, ಪೈಜಾಮಾ ಆಗಲಿ ಅರ್ಧಅಡಿ ಮೇಲಕ್ಕೆ ಕಟ್ಟಿಕೊಂಡರೆ ಉಳಿದ ಹಿಂದೂ, ಕ್ರೈಸ್ತವ ಮತದವರು ಹಾಗೆ ಕಟ್ಟಿಕೊಳ್ಳುವುದಿಲ್ಲ ಅಲ್ಲವೆ! ಹೀಗೆ ಆಚಾರ ವ್ಯವಹಾರಗಳಲ್ಲಿಯೂ ಬೇರೆ ಬೇರೆ ಮತಗಳಾಗಿ ಎಲ್ಲರೂ ಹೇಳಿಕೊಳ್ಳುತ್ತಿದ್ದಾರಲ್ಲಾ! ಆದರೆ ಮತ ಎನ್ನುವುದು, ಅದರ ಆಚಾರ ವ್ಯವಹಾರಗಳು ಎಲ್ಲಿಂದ ಹುಟ್ಟಿವೆ” ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗಿದೆ.

ಭಗವದ್ಗೀತೆಯಲ್ಲಾಗಲಿ, ಬೈಬಲ್‌ನಲ್ಲಾಗಲಿ, ಖುರಾನ್‌ನಲ್ಲಾಗಲಿ ಮತ ಎನ್ನುವುದು ಇಲ್ಲ. ಆದರೆ ಅವರು ಮೂರು ಮತಗಳಾಗಿ ಹೇಳಿಕೊಳ್ಳುವುದು, ಮತದಲ್ಲಿನ ಆಚಾರ ವ್ಯವಹಾರಗಳು ಎಲ್ಲವು ಪಕ್ಕ ಗ್ರಂಥದೊಳಗಿನವೆಂದು ಹೇಳಬಹುದು. ಹಿಂದೂಗಳು ಪುರಾಣಗಳನ್ನು, ವೇದಗಳನ್ನು ಆಶ್ರಯಿಸಿರುವು ದರಿಂದ, ಹಾಗೆಯೇ ಇಸ್ಲಾಮ್ ಮತದವರು ಹದೀಸು ಗ್ರಂಥಗಳನ್ನು ಆಶ್ರಯಿಸಿರುವು ದರಿಂದ, ಕ್ರೈಸ್ತರು ಉಳಿದ 62 ಸುವಾರ್ತೆಗಳನ್ನು ಆಶ್ರಯಿಸಿರುವು ದರಿಂದ ಅವರಲ್ಲಿ ಬೇಧಗಳು, ಮತಗಳ ಏರು ಪೇರು (ವ್ಯತ್ಯಾಸಗಳು)

ಕಾಣಿಸುತ್ತಿವೆ. ಮುಸ್ಲಿಮ್‌ರು ಲುಂಗಿಯಾಗಲಿ, ಪೈಜಾಮನ್ನಾಗಲಿ ಮೇಲಕ್ಕೆ ಕಟ್ಟಿಕೊಳ್ಳಬೇಕೆಂದು ಖುರಾನ್ ಗ್ರಂಥವು ಹೇಳಲಿಲ್ಲ. ಹಿಂದೂಗಳಿಗೆ ವೇದಗಳಿದ್ದ ಹಾಗೆ ಮುಸ್ಲಿಮ್‌ರಿಗೆ ಹದೀಸುಗಳಿವೆಯೆಂದು ತಿಳಿಯಬೇಕು. ವೇದಗಳಿಂದ ಹಿಂದೂಗಳಲ್ಲಿ ಸ್ವಲ್ಪ ಆಚಾರ ವ್ಯವಹಾರಗಳು ಬಂದಹಾಗೆ, ಮುಸ್ಲಿಮ್‌ರಲ್ಲಿ ಸಹ ಹದೀಸುಗಳಿಂದ ಸ್ವಲ್ಪ ಆಚಾರ ವ್ಯವಹಾರಗಳು ಬಂದಿವೆ. **ದೈವಜ್ಞಾನ ಹೊರತು ಹಿಂದುಗಳ ಆಚಾರ ವ್ಯವಹಾರಗಳು ಯಾವುವೂ ಸಹ ಭಗವದ್ಗೀತೆಯಲ್ಲಿ ಇಲ್ಲ. ಹಾಗೆ ದೇವರ ಜ್ಞಾನ ಹೊರತು ಮುಸ್ಲಿಂ ಆಚಾರ ವ್ಯವಹಾರಗಳು ಯಾವುವೂ ಸಹ ಖುರಾನ್ ಗ್ರಂಥದಲ್ಲಿ ಇಲ್ಲ.** ಮೂರು ಮೂಲ ಗ್ರಂಥಗಳಲ್ಲಿಯೂ ದೈವಪಥವಿದೆ. ಆದರೆ ಮತ ಎಂಬ ಪ್ರಸ್ತಾವನೆಯೇ ಇಲ್ಲ. ಆದರೆ ಮನುಷ್ಯ, ದೇವರು ಹೇಳಿದ ಪಥವನ್ನು ಮತವನ್ನಾಗಿ ಬದಲಾಯಿಸಿಕೊಂಡಿದ್ದಾನೆ. ಪಥ ಎಂದರೆ ಮಾರ್ಗ ಎಂದರ್ಥ. ದೇವರು ಹೇಳಿದ ಮೂರು ಮತಗಳಲ್ಲಿ ಮನುಷ್ಯ ಏನನ್ನು ಇಷ್ಟಪಡುತ್ತಾನೋ ಅದನ್ನು ಮತ ಎನ್ನುತ್ತಿದ್ದೇವೆ. ಮತ ಎಂದರೆ ಒಪ್ಪಿಕೊಳ್ಳುವುದು ಅಥವಾ ಇಷ್ಟಪಡುವುದೆಂದು ಅರ್ಥ. ದೇವರು ಹೇಳಿದ ಮಾರ್ಗಗಳಲ್ಲಿ ಒಂದನ್ನು ಮನುಷ್ಯ ಒಪ್ಪಿಕೊಂಡರೆ ಅದು ಅವನ ಮತವಾಗುತ್ತದೆ. ಒಂದನ್ನು ಒಪ್ಪಿಕೊಂಡರೆ ಉಳಿದವುಗಳನ್ನು ಒಪ್ಪಿಕೊಂಡಿಲ್ಲವೆಂದು ಅರ್ಥ ಅಲ್ಲವೆ! ಹಾಗೆ ದೇವರ ಮಾರ್ಗದಲ್ಲಿ ಒಂದನ್ನು ಮಾತ್ರ ಇಷ್ಟಪಡುವುದು ಅಥವಾ ಒಪ್ಪಿಕೊಳ್ಳುವು ದನ್ನು ಮತ ಎನ್ನುತ್ತಿದ್ದೇವೆ. ಈ ಲೆಕ್ಕ ಪ್ರಕಾರ ಹಿಂದೂ ಮತಸ್ಥರು ಉಳಿದ ಎರಡು ಮತಗಳನ್ನು ಒಪ್ಪಿಕೊಳ್ಳುವುದಿಲ್ಲ. ಹಾಗೆಯೇ ಕ್ರೈಸ್ತರು ಇಸ್ಲಾಮ್‌ನ್ನು, ಇಂದೂತ್ವವನ್ನು ಒಪ್ಪಿಕೊಳ್ಳುವುದಿಲ್ಲ. ಒಂದನ್ನು ಒಪ್ಪಿಕೊಂಡು ಉಳಿದ ಪಥಗಳನ್ನು ಒಪ್ಪಿಕೊಳ್ಳದಿದ್ದಾಗ ಆಗ ಅದು ಒಪ್ಪಿಕೊಂಡ ಮನುಷ್ಯನಿಗೆ ಮತವಾಗುತ್ತದೆ. ಈ ವಿಧವಾಗಿ ಮೂರು ಗ್ರಂಥಗಳಲ್ಲಿನ ವಿಷಯವು, ಪರಸ್ಪರ ಅವಗಾಹನೆ ಇಲ್ಲದಿರುವಾಗ, ಮೂರು ಪಥಗಳು ಮೂರು ಮತಗಳಾಗಿ ಬದಲಾಗಿವೆ. ಮನುಷ್ಯ ಮೂರು ಮೂಲ ಗ್ರಂಥಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಒಂದನ್ನು ಇಷ್ಟಪಡುವುದು, ಮತ್ತೊಂದರ ಮೇಲೆ ಅಯಿಷ್ಟತೆಯನ್ನು ತೋರಿಸುವದರಿಂದ ಆತನಿಗೆ ಸಮ್ಮತವಾದದ್ದು ಯಾವುದೋ ಅದು ಮತವಾಗಿದೆ.

ಆದ್ದರಿಂದ ಮತಕ್ಕೆ ಅತೀತನು ಆಗಬೇಕಾದರೆ, ಯಾವುದಾದರೆ ಜ್ಞಾನವೋ ಅದನ್ನು ಮನುಷ್ಯ ಸ್ವೀಕರಿಸುತ್ತಿರಬೇಕು. ಆಗಲೇ ಮನುಷ್ಯ ಪಥದಲ್ಲಿ ಪ್ರಯಣಿಸಿದಂತಾಗುತ್ತದೆ. ಹಾಗಲ್ಲದೆ ಹೋದರೆ ಆತನು ಮತದಲ್ಲಿ ಸಿಲುಕಿಕೊಂಡಂತಾಗುತ್ತದೆ. ಪ್ರಸ್ತುತ ಕಾಲದಲ್ಲಿ ಎಲ್ಲರೂ ಅವರಿಗೆ ಇಷ್ಟವಾದ ಮತದಲ್ಲಿಯೇ ಇದ್ದಾರೆ. ಇಷ್ಟವಿಲ್ಲದ ಪಥಗಳನ್ನು ಅಸೂಯದಿಂದ ನೋಡುತ್ತಿದ್ದಾರೆ. ದೇವರು ತಿಳಿಸಿದ ಮಾರ್ಗಗಳಲ್ಲಿ ಮನುಷ್ಯನಿಗೆ ಸಮ್ಮತವು, ಅಸಮ್ಮತವು ಇರುವವರೆಗೂ ಮತ ಇರುತ್ತದೆ. ಎಲ್ಲವೂ ದೇವರು ಹೇಳಿದ ಜ್ಞಾನಗಳು, ಧರ್ಮಗಳು ಅಗಿರುವಾಗ, ಎಲ್ಲರಿಗೂ ದೇವರು ಒಬ್ಬನೇ ಆದಾಗ ಪಥವು ಮಾತ್ರವೇ ಇರುತ್ತದೆ. ಹಾಗಲ್ಲದೆ ನಮ್ಮ ಜ್ಞಾನ, ನಮ್ಮ ಧರ್ಮ ಬೇರೆ ಎಂದಾಗ, ನಮ್ಮ ದೇವರು ನಿಮ್ಮ ದೇವರು ಬೇರೆ ಎಂದಾಗ ಪಥವು ಇರುವುದಿಲ್ಲ. ಅಲ್ಲಿ ಮತ ಇರುತ್ತದೆ.

**ಮುಖ್ಯವಾದ ಮೂರು ಮತ ಗ್ರಂಥಗಳಲ್ಲಿಯೂ ಪಥಕ್ಕೆ ಸಂಬಂಧಿಸಿದ ಸಮಾಚಾರವಿರುವಾಗ, ಪಕ್ಕದ ಗ್ರಂಥಗಳಲ್ಲಿ ಮತಕ್ಕೆ ಸಂಬಂಧಿಸಿದ ಸಮಾಚಾರವಿದೆ.** ಮನುಷ್ಯ ಮೂಲ ಗ್ರಂಥಗಳಿಗಿಂತ ಪಕ್ಕದಲ್ಲಿರುವ ಗ್ರಂಥಗಳಲ್ಲಿನ ಸಮಾಚಾರವನ್ನು ನೋಡಿ ಮಾಯೆಯಲ್ಲಿ ಬಿದ್ದು ಮತವನ್ನು ಸೃಷ್ಟಿಸಿಕೊಂಡಿದ್ದಾನೆ. ಆದ್ದರಿಂದ ಮತ ಎನ್ನುವುದು ಮನುಷ್ಯನಿಂದಲೇ ಸೃಷ್ಟಿಯಾಗಿದೆಯೆಂದು ಹೇಳಬಹುದು. ಹಾಗೇ ಪಥವನ್ನು ದೇವರು ನೆಲಗೊಳಿಸಿದ್ದಾನೆಂದು ಹೇಳಬಹುದು. ಮತ ಪಥಗಳ ತಾರತಮ್ಯಗಳು ತಿಳಿಯದವನು ಮತದಲ್ಲಿಯೇ ಸಿಲುಕಿಕೊಂಡು ದೇವರ ಮಾರ್ಗಕ್ಕೆ ದೂರವಾಗಿ ಇರುವನು. ಪ್ರತಿ ಮತಸ್ಥರು ನಾವು ದೇವರಿಗೆ ಹತ್ತಿರದಲ್ಲಿದ್ದೇವೆಂದು ಭ್ರಮೆಯಲ್ಲಿ ಮುಳುಗಿದ್ದಾರೆ. ದೈವಮಾರ್ಗವನ್ನು ಅನುಸರಿಸಿದರೇನೆ ದೇವರಿಗೆ ಹತ್ತಿರವಾಗುತ್ತೇವೆಂದು ತಿಳಿಯದೆ ತಾವು ಒಂದು ಮತವನ್ನು ಅನುಸರಿಸುತ್ತಾ ದೇವರಿಗೆ ಹತ್ತಿರದಲ್ಲಿದ್ದೇವೆಂದುಕೊಳ್ಳುವುದು ಭ್ರಮೆ ಅಲ್ಲದೆ ಏನಾಗುತ್ತದೆ? ಈಗಲಾದರೂ ಎಲ್ಲಾ ಮತದವರು ಗ್ರಹಿಸಬೇಕಾದ ಮುಖ್ಯವಾದ ವಿಷಯ, ಮತ ಎಂದಿಗೂ ದೇವರ ಹತ್ತಿರಕ್ಕೆ ಸೇರಿಸುವುದಿಲ್ಲವೆಂದು,

ಮತಗಳಿಗೆ ಅತೀತವಾದ ಪಥವು ಮಾತ್ರವೇ ದೇವರ ಹತ್ತಿರಕ್ಕೆ ಸೇರಿಸುತ್ತದೆಂದು ತಿಳಿಯಬೇಕು. ತನ್ನ ಮತವನ್ನು ಸಮರ್ಥಿಸುತ್ತಾ ಇತರರ ಮತವನ್ನು ವಿಮರ್ಶಿಸುತ್ತಾ ಇರುವುದರಿಂದ ಪ್ರಯೋಜನ ಇಲ್ಲವೆಂದು, ಇತರ ಮತದಲ್ಲಿನ ಸತ್ಯವನ್ನು ಸಹ ಗ್ರಹಿಸಿದರೆ, ಉಳಿದ ಮತಗಳಲ್ಲಿಯೂ ಸಹ ದೈವಜ್ಞಾನ ವಿದೆಯೆಂದು ತಿಳಿಯಬಹುದು. ಅಂದರೆ ಉಳಿದ ಮತಗಳಲ್ಲಿ ಸಹ ಇಂದೂ ಸಂಸ್ಕೃತಿ ಇದೆಯೆಂದು ತಿಳಿಯಬಹುದು. ಉಳಿದ ಮತಗಳಲ್ಲಿ ಸಹ ಜ್ಞಾನ ತಿಳಿದ ಪ್ರತಿ ಮನುಷ್ಯ ಕೂಡ ಇಂದೂ ಎಂದು ತಿಳಿಯುತ್ತದೆ. ಇದರಿಂದ ಇಂದೂ ಸಂಸ್ಕೃತಿ ಒಂದು ಮತಕ್ಕೆ ಪರಿಮಿತಿ ಅಲ್ಲವೆಂದು, ಎಲ್ಲ ಮತಗಳಿಗು ಸಂಬಂಧಿಸಿರುವುದೆಂದು ತಿಳಿದುಹೋಗುತ್ತದೆ. ಯಾವ ಮತದಲ್ಲಿ ಹುಟ್ಟಿದವನು ಆ ಮತದಲ್ಲಿಯೇ ಇದ್ದು, ದೇವರು ಹೇಳಿದ ಎಲ್ಲ ಮತಗಳಲ್ಲಿನ ಜ್ಞಾನವನ್ನು ಗ್ರಹಿಸಿಕೊಂಡಾಗ ಅವನು ನಿಜವಾದ ಇಂದೂವಾಗುವನು. ಇಲ್ಲಿ ಮತ ಬದಲಾಯಿಸಿದರೆ ಇಂದೂವಾಗುತ್ತೀಯ ಎಂದು ಹೇಳುವುದಿಲ್ಲ. ಮತ ಬದಲಾಯಿಸದೆ ಇಂದೂವಾಗು (ಜ್ಞಾನಿಯಾಗು) ವ ವಿಧಾನವನ್ನು ತಿಳಿಸಿದ್ದೇವೆ. ದೈವ ಧರ್ಮಗಳಿರುವ ಎಲ್ಲ ಪಥಗಳಲ್ಲಿಯೂ ಇಂದೂತ್ವವಿದೆಯೆಂದು, ಯಾವ ಮತ (ಯಾವ ಪಥ) ದಲ್ಲಿಯಾದರೂ ಜ್ಞಾನ ತಿಳಿದವನು ಉಳಿದ ಮತದಲ್ಲಿನ ಜ್ಞಾನವನ್ನು ಸಹ ತಿಳಿದುಕೊಳ್ಳುವ ಇಂದೂವಾಗಿ ಚಲಾವಣೆ ಆಗುತ್ತಿದ್ದಾನೆ. ಇಂದೂ ಸಂಸ್ಕೃತಿಯನ್ನು ದೇವರು ತಿಳಿಸಿದ್ದಾನೆ, ಆದ್ದರಿಂದ ಅದು ಎಲ್ಲ ಮತಗಳಲ್ಲಿಯೂ ಇದೆಯೆಂದು ಹೇಳುತ್ತಿದ್ದೇವೆ. ಅದನ್ನು ತಿಳಿಯುವುದೇ ಪ್ರತಿ ಮನುಷ್ಯನ ಕರ್ತವ್ಯ.

ಭಗವದ್ಗೀತೆಯಲ್ಲಿ ಭಗವಂತನಾದ ಕೃಷ್ಣನು, ಅರ್ಜುನನಿಗೆ ವಿಶ್ವರೂಪ ವನ್ನು ತೋರಿಸಿದಾಗ, ದೇವರ ವಿಶ್ವರೂಪವನ್ನು ನೋಡಿದ ಅರ್ಜುನನಿಗೆ ಏನು ಅರ್ಥವಾಗದೆ ಯಾರು ನೀನು ಎಂದು ಕೇಳುತ್ತಾನೆ. ಆಗ ವಿಶ್ವರೂಪ ದಲ್ಲಿರುವ ದೇವರು ಅದಕ್ಕೆ ಉತ್ತರವಾಗಿ ಚಿಕ್ಕ ಪದವನ್ನು ಉಪಯೊಗಿಸಿ **"ಕಾಲೋಽಸ್ಮಿ"** ಎನ್ನುತ್ತಾನೆ. ಕಾಲೋಽಸ್ಮಿ ಎಂದರೆ ಕಾಲವಾಗಿ ಇದ್ದೇನೆಂದು

ಅರ್ಥ. ಕಾಲ ಎನ್ನುವುದು ಒಂದು ವಿಧದಲ್ಲಿ ಹೆಸರಲ್ಲದ ಹೆಸರೇ ಆದರೂ ಕಾಲಕ್ಕೆ ರೂಪವಿಲ್ಲ. ಕಾಲ ನಮ್ಮ ಮುಂದೆಯೇ ಇದ್ದರೂ ಅದಕ್ಕೆ ರೂಪವಿಲ್ಲ. ಕಾಲ ಹೇಗಿದೆಯೋ ಹೇಳು ಎಂದು ಕೇಳಿದರೆ ಅದನ್ನು ಕುರಿತು ಯಾರೂ ಯಾವ ವಿವರವನ್ನು ಕೊಡಲಾರರು. ಕಾಲ ದೈವ ಸ್ವರೂಪವಾದದ್ದು, ಆದ್ದರಿಂದ ಅದು ಹೀಗಿದೆಯೆಂದು ಯಾರೂ ಹೇಳುವುದಿಲ್ಲ. ರೂಪ ಇಲ್ಲದ್ದು ಕಾಲ, ಆದರೂ ಕಾಲ ನಡೆದ, ನಡೆಯುತ್ತಿರುವ, ನಡೆಯಬೇಕಾಗಿರುವ ಎಂಬುವ ಮೂರು ಭಾಗಗಳಾಗಿ ಇದೆ. ಗತಿಸಿದ ಕಾಲವನ್ನು ಭೂತಕಾಲ ಎನ್ನುತ್ತೇವೆ, ಗತಿಸುತ್ತಿರುವ ಕಾಲವನ್ನು ವರ್ತಮಾನ ಕಾಲ ಎನ್ನುತ್ತೇವೆ. ಹಾಗೆ ಮುಂದೆಬರುವ ಕಾಲವನ್ನು ಭವಿಷ್ಯತ್ ಕಾಲ ಎನ್ನುತ್ತೇವೆ. ಕಾಲ ಎಂದರೆ ದೇವರು ಎಂದು ಅರ್ಥವಾಗಿದೆ ಅಲ್ಲವೆ! ಕಾಲ ಮೂರು ವಿಧಗಳಲ್ಲಿ ನಮ್ಮ ಮುಂದೆಯೆ, ನಮ್ಮ ಕಣ್ಣೆದುರಿಗಿದ್ದರೂ ಅದನ್ನು ಅನುಭವಿಸದೆ ಹೋಗುತ್ತಿದ್ದೇವೆ. ಕಾಲ ಹೇಳಿಕೊಳ್ಳುವು ದಕ್ಕೆ ಇದೆ, ಆದರೆ ಅನುಭವಕ್ಕೆ ಬಾರದೆಂದು ತಿಳಿಯುತ್ತಿದೆ. ದೇವರು ಇದ್ದಾನೆಂದು ಹೇಳುವುದಕ್ಕೆ ಮಾತ್ರವೆ ಇದ್ದಾನೆ ಆದರೆ ಆತನು ಯಾರ ಅನುಭವಕ್ಕೆ ಬಾರದವನೆಂದು ಪ್ರತ್ಯಕ್ಷ ಕಾಲವನ್ನನುಸರಿಸಿ ತಿಳಿದು ಹೋಗುತ್ತಿದೆ. ಕಾಲ ಪ್ರತ್ಯಕ್ಷ ಸಾಕ್ಷಿಯಾಗಿದ್ದರೂ, ಅದು ಏನೋ ಯಾರೂ ಹೇಳದಂತೆ, ದೇವರ ಧರ್ಮಗಳು ನಮಗೆ ತಿಳಿಯುತ್ತಿರುವುದರಿಂದ, ದೇವರನ್ನು ಯಾರೂ ತಿಳಿಯಲಾರರು. ಇದನ್ನು ಅನುಸರಿಸಿ ದೇವರು ಧರ್ಮಬದ್ದನು ಎಂದೂ ಮತ್ತೆ ದೇವರು ಧರ್ಮಾತೀತನೆಂದು ಎರಡು ವಿಧಗಳಲ್ಲಿ ಹೇಳಬಹುದು.

ದೇವರು ಕಾಲಸ್ವರೂಪನು, ಆದ್ದರಿಂದ ಕಾಲವನ್ನು ಕುರಿತು ವಿವರವಾಗಿ ತಿಳಿದುಕೊಂಡರೆ ದೇವರ ಜ್ಞಾನವನ್ನು ಕುರಿತು ತಿಳಿದಂತಾಗುತ್ತದೆ. ಆದ್ದರಿಂದ ಕಾಲವನ್ನು ಕುರಿತು ವಿವರವಾಗಿ ಹೇಳಿಕೊಂಡರೆ 60 ಸೆಕೆಂಡಿಗೆ ಒಂದು ನಿಮಿಷವೆಂದು, 60 ನಿಮಿಷಗಳು ಒಂದು ಗಂಟೆಯೆಂದು, 24 ಗಂಟೆಗಳು ಒಂದು ದಿನವೆಂದು, 30 ದಿನಗಳು ಒಂದು ತಿಂಗಳೆಂದು, 12 ತಿಂಗಳುಗಳು ಒಂದು ಸಂವತ್ಸರವೆಂದು ಕಾಲವನ್ನು ಅಳೆದು ಹೇಳುತ್ತಿದ್ದೇವೆ. ಆದರೂ ಕಾಲದ

ಒಂದು ನಿಜಸ್ವರೂಪ ಯಾರಿಗೂ ತಿಳಿದಿಲ್ಲ. ಕಾಲ ಮೂರು ವಿಧಗಳಾಗಿ ಇದೆಯೆಂದು ಹೇಳಿಕೊಂಡಿದ್ದೇವಲ್ಲ! ಹಾಗೆ ದೇವರು ಮೂರು ವಿಧಗಳಾಗಿ ಇದ್ದಾನೆಂದು ಹೇಳಬಹುದು. ಕಾಲವು ಭೂತ, ವರ್ತಮಾನ, ಭವಿಷ್ಯತ್ ಎಂದು ಮೂರು ವಿಧಗಳಾಗಿ ಇದ್ದಹಾಗೆ ದೇವರು ಸಹ ಕ್ಷರ, ಅಕ್ಷರ, ಪುರುಷೋತ್ತಮ ನೆಂದು ಮೂರು ವಿಧಗಳಾಗಿ ಹೇಳಲ್ಪಡುತ್ತಾನೆ. ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗ 16, 17 ಶ್ಲೋಕಗಳಲ್ಲಿ ಮೂವರು ಪುರುಷರನ್ನು ಕುರಿತು ಹೇಳಲಾಗಿದೆ. ಕಾಲ ದೈವಸ್ವರೂಪ ಆಗಿರುವಾಗ ಕಾಲ ಮೂರು ವಿಧಗಳಾಗಿ ಇದೆ. ಹಾಗೆ ದೈವವು ಮೂರು ವಿಧಗಳಾಗಿ ಇದ್ದಾನೆ. ಕಾಲದ ಮೂರು ವಿಧಗಳು ಮನುಷ್ಯನಿಗೆ ತಿಳಿಯುವುದು, ಆದರೆ ಬಹಳ ಜನರಿಗೆ ದೈವದ ಮೂರು ವಿಧಗಳು ಏನೋ ತಿಳಿದಿಲ್ಲ. ನಾವು ಹೇಳುತ್ತಿರುವ ತ್ರೈತಸಿದ್ಧಾಂತ, ದೈವವು ಮೂರು ವಿಧಗಳಲ್ಲಿ ಇದ್ದಾನೆಂದು ಹೇಳುತ್ತಿದೆ. ಗೀತೆಯಲ್ಲಿ ದೇವರು ಮೂವರು ಪುರುಷರಾಗಿ ಕ್ಷರ, ಅಕ್ಷರ, ಪುರುಷೋತ್ತಮರಾಗಿ ಹೇಳಲ್ಪಟ್ಟಿದ್ದಾನೆ. ವಿವರವಾಗಿ ಹೇಳಿಕೊಂಡರೆ ಕ್ಷರ ಎಂದರೆ ಒಬ್ಬ ಜೀವಿ ಅಥವಾ ಜೀವಾತ್ಮ ಎಂದು ಹೇಳ ಬಹುದು. ಕ್ಷರ ಎಂದರೆ ನಾಶ ಹೊಂದುವವನೆಂದು ಅರ್ಥ. ಎಂದಿಗಾದರೂ ಜೀವಿಯು ನಾಶ ಹೊಂದುವವನೆಂದು ಆದ್ದರಿಂದ ಜೀವಾತ್ಮನನ್ನು ಕ್ಷರನು ಎಂದಿದ್ದೇವೆ. ಅಕ್ಷರನು ಎಂದರೆ ನಾಶ ಹೊಂದದೆ ಇರುವವನೆಂದು ಅರ್ಥ. ನಾಶ ಹೊಂದುವ ಜೀವಾತ್ಮವಾಗಿ ನಾವು ನಮ್ಮ ಶರೀರದಲ್ಲಿ ಇದ್ದೇವೆ. ನಾಶವಾಗದ ಅಕ್ಷರನು ಪ್ರತಿ ಶರೀರದಲ್ಲಿಯೂ ಜೀವಾತ್ಮನೊಂದಿಗೆ ಇದ್ದಾನೆ. ಕ್ಷರನಾದ ಜೀವಾತ್ಮನು ಶರೀರದಲ್ಲಿ ಒಂದು ಜಾಗದಲ್ಲಿ ಮಾತ್ರ ಇರುತ್ತಾನೆ, ಅಕ್ಷರನಾದ ಆತ್ಮ ಶರೀರವೆಲ್ಲ ವ್ಯಾಪಿಸಿದೆ. ಮೂರನೆ ಪುರುಷನಾದ ಪುರುಷೋತ್ತಮನು (ಪರಮಾತ್ಮ) ವಿಶ್ವವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿರುವುದೇ ಅಲ್ಲದೆ ಶರೀರದಲ್ಲಿಯೂ ಸಹ ವ್ಯಾಪಿಸಿದ್ದಾನೆ. ಮೂರು ವಿಧಗಳ ಪುರುಷರಲ್ಲಿ ಜೀವಾತ್ಮ ಶರೀರದಲ್ಲಿ ಒಂದುಕಡೆ, ಆತ್ಮ ಶರೀರವೆಲ್ಲಾ, ಪರಮಾತ್ಮ ಶರೀರದ ಹೊರಗೂ, ಶರೀರದ ಒಳಗೂ ಇದ್ದಾನೆ.

**ಕಾಲ ದೈವಸ್ವರೂಪ ಆದ್ದರಿಂದ ನಾನು ಕಾಲ ಎಂದು ಗೀತೆಯಲ್ಲಿ ದೇವರು ಹೇಳಿದ್ದಾನೆ. ಇದರಿಂದ ಕಾಲ, ದೈವ ಎರಡು ಒಂದೇ ಎಂದು, ಎರಡೂ ಮೂರು ಭಾಗಗಳಾಗಿವೆಯೆಂದು ಹೇಳಿಕೊಂಡಿದ್ದೇವೆ.** ಈಗ ಕಾಲ ಮೂರು ಭಾಗಗಳಿಂದ ದೈವ ಮೂರು ಭಾಗಗಳನ್ನು ಅನ್ವಯಿಸಿ ನೋಡಿದರೆ ಮೂರು ಕಾಲಗಳಿಗೆ ಮೂರು ಆತ್ಮಗಳು ಸರಿಹೋಗುತ್ತವೆ. ಮೂರು ಕಾಲಗಳು ಮೂರು ಆತ್ಮ ಗಳೊಂದಿಗೆ ಸರಿಹೋಗುವುದರಿಂದ, ಕಾಲ ದೈವಸ್ವರೂಪ ಎನ್ನುವುದೇ ಅಲ್ಲದೆ ದೈವ ಕಾಲಸ್ವರೂಪವೆಂದು, ಕಾಲ ಆತ್ಮ ಸ್ವರೂಪವೆಂದು ಸಹ ಹೇಳಬಹುದು. ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಆರನೇ ಶ್ಲೋಕದಲ್ಲಿ ಸರ್ವಜೀವರಾಶಿಗಳಿಗೆ ನಾನು ಈಶ್ವರನು (ಅಧಿಪತಿ) ಎಂದು ಹೇಳುತ್ತಾ **"ಭೂತಾನಾ ಮೀಶ್ವರೋಪಿಸನ್"** ಎಂದು ಹೇಳಿದ್ದಾನೆ. ಹಾಗೆ ರಾಜವಿದ್ಯಾ ರಾಜಗುಹ್ಯಾ ಯೋಗ ಎಂಬ ಅಧ್ಯಾಯದಲ್ಲಿ ಹನ್ನೊಂದನೆಯ ಶ್ಲೋಕದಲ್ಲಿ ನಾನು ಜೀವಿಗಳೆಲ್ಲರಿಗೂ ಮಹೇಶ್ವರ ಎಂದು ಹೇಳುತ್ತಾ **"ಮಮ ಭೂತ ಮಹೇಶ್ವರಮ್"** ಎಂದು ಹೇಳಿದ್ದಾನೆ. ಎರಡು ವಾಕ್ಯಗಳಲ್ಲಿಯೂ ಜೀವಿಗಳನ್ನು ಭೂತಗಳೆಂದು ಹೇಳಲಾಗಿದೆ. ಇದರಿಂದ ಭೂತ ಎಂದರೆ ಜೀವಾತ್ಮ ಎಂದು ತಿಳಿದುಹೋಗುತ್ತದೆ. ಮೂರು ಕಾಲಗಳಲ್ಲಿ ಭೂತಕಾಲವಿದ್ದಹಾಗೆ, ಮೂರು ಆತ್ಮಗಳಲ್ಲಿ ಭೂತಾತ್ಮ ಎನ್ನುವುದು ಒಂದಿದೆ, ಅದೇ ಜೀವಾತ್ಮ ಎಂದು ಹೇಳಬಹುದು. ಈ ಆಧಾರದಿಂದ ಭೂತಕಾಲಕ್ಕೆ ಜೀವಾತ್ಮನನ್ನು, ವರ್ತಮಾನ ಕಾಲಕ್ಕೆ ಆತ್ಮನನ್ನು, ಭವಿಷ್ಯತ್ ಕಾಲಕ್ಕೆ ಪರಮಾತ್ಮ ನನ್ನು ಹೋಲಿಸಿ ಹೇಳಬಹುದು.

12 ತಿಂಗಳುಗಳು ಒಂದು ಸಂವತ್ಸರ ಆದಹಾಗೆ 60 ಸಂವತ್ಸರಗಳಿಗೆ ಒಂದು ಉಪಯುಗ ಆಗುತ್ತದೆ. 7,200 ಉಪಯುಗಗಳು ಸೇರಿ ಒಂದು ಯುಗವಾಗುತ್ತದೆ. ಅದೇ ಕಲಿಯುಗ, ಹಾಗೆ 14,400 ಉಪಯುಗಗಳು ಒಂದು ದ್ವಾಪರಯುಗ, 21,600 ಉಪಯುಗಗಳು ಒಂದು ತ್ರೇತಾಯುಗ, 28,800 ಉಪಯುಗಗಳು ಸೇರಿ ಒಂದು ಕೃತಯುಗವಾಗುತ್ತಿದೆ. ಯುಗಗಳು ಮೂರು ಹೆಸರುಗಳಿಂದ ಇವೆ. ಒಂದನೆಯದು ಉಪಯುಗ, ಎರಡನೆಯದು ಯುಗ,

ಮೂರನೆಯದು ಮಹಾಯುಗವೆಂದು ಹೇಳುತ್ತಿದ್ದೇವೆ. ನಾಲ್ಕು ಯುಗಗಳು ಸೇರಿ ಒಂದು ಮಹಾಯುಗವಾಗುತ್ತದೆ. ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ ನಾಲ್ಕು ಯುಗಗಳು ಸೇರಿ ಮಹಾಯುಗ ಆದಾಗ, 72,000 ಉಪಯುಗಗಳು ಸೇರಿ ಒಂದು ಮಹಾಯುಗದ ಕಾಲವಾಗುತ್ತದೆ. ಕಲಿಯುಗ 7,200 ಉಪಯುಗಗಳೇ ಆದಾಗ ಅದಕ್ಕೆ ಹತ್ತರಷ್ಟು ಹೆಚ್ಚಿಗೆ ಒಂದು ಮಹಾ ಯುಗವಾಗುತ್ತಿದೆ. ಯುಗಗಳನ್ನು ಸಂವತ್ಸರಗಳಲ್ಲಿ ಹೇಳಿಕೊಂಡರೆ ಕಲಿಯುಗ 4,32,000 ಸಂವತ್ಸರಗಳು. ದ್ವಾಪರಯುಗ 8,64,000 ಸಂವತ್ಸರಗಳು. ತ್ರೇತಾಯುಗ 12,96,000 ಸಂವತ್ಸರಗಳು. ಕೃತಯುಗ 17,28,000 ಸಂವತ್ಸರಗಳು. ನಾಲ್ಕು ಯುಗಗಳ ಕಾಲವು 43,20,000 ಸಂವತ್ಸರಗಳು. ಕಲಿಯುಗಕ್ಕೆ ಹತ್ತರಷ್ಟು ಹೆಚ್ಚಿಗೆ ಒಂದು ಮಹಾಯುಗ ಆಗುತ್ತದೆ.

**ಕಲಿಯುಗ** = 7,200 ಉಪಯುಗಗಳು. ಒಂದು ಉಪಯುಗ 60 ಸಂವತ್ಸರಗಳ ಪ್ರಕಾರ ಮೊತ್ತವು **ಕಲಿಯುಗ : 4,32,000 ಸಂ॥**

**ದ್ವಾಪರಯುಗ** = 14,400 ಉಪಯುಗಗಳು. ಒಂದು ಉಪಯುಗ 60 ಸಂವತ್ಸರಗಳ ಪ್ರಕಾರ ಮೊತ್ತವು **ದ್ವಾಪರಯುಗ: 8,64,000 ಸಂ॥**

**ತ್ರೇತಾಯುಗ** = 21,600 ಉಪಯುಗಗಳು. ಒಂದು ಉಪಯುಗ 60 ಸಂವತ್ಸರಗಳ ಪ್ರಕಾರ ಮೊತ್ತವು **ತ್ರೇತಾಯುಗ : 12,96,000 ಸಂ॥**

**ಕೃತಯುಗ** = 28,800 ಉಪಯುಗಗಳು. ಒಂದು ಉಪಯುಗ 60 ಸಂವತ್ಸರಗಳ ಪ್ರಕಾರ ಮೊತ್ತವು **ಕೃತಯುಗ : 17,28,000 ಸಂ॥**

| | | |
|---|---|---|
| ಕಲಿಯುಗ | = 60 X 7,200 = | 4,32,000 |
| ದ್ವಾಪರಯುಗ | = 60 X 14,400 = | 8,64,000 |
| ತ್ರೇತಾಯುಗ | = 60 X 21,600 = | 12,96,000 |
| ಕೃತಯುಗ | = 60 X 28,800 = | 17,28,000 |
| **ಒಂದು ಮಹಾಯುಗ** | **= 60 X 72,000 =** | **43,20,000** |

ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗ ಎಂಬ ಅಧ್ಯಾಯದಲ್ಲಿ 17, 18 ಶ್ಲೋಕಗಳಲ್ಲಿ ಪ್ರಪಂಚದ ಆಯುಸ್ಸು ಹೇಳಲಾಗಿದೆ.

**17. ಶ್ಲೋ॥ ಸಹಸ್ರಯುಗಪರ್ಯನ್ತ ಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗ ಸಹಸ್ರಾನ್ತಾಂ ತೇಹೂ ರಾತ್ರ ವಿದೋ ಜನಾಃ॥**

ಈ ಶ್ಲೋಕದಲ್ಲಿ ಸಾವಿರ ಯುಗಗಳು ದೇವರಿಗೆ ಒಂದು ಹಗಲೆಂದು, ಸಾವಿರ ಯುಗಗಳು ಒಂದು ರಾತ್ರಿ ಎಂದು ತಿಳಿದು ಬರುತ್ತದೆ. ನಂತರ ಕೆಳಗಿನ ಶ್ಲೋಕದಲ್ಲಿ

**18. ಶ್ಲೋ॥ ಅವ್ಯಕ್ತಾ ದ್ವ್ಯಕ್ತಯಸ್ಸರ್ವಾಃ ಪ್ರಭವನ್ತ್ಯ ಹರಾಗಮೇ।**
**ರಾತ್ರ್ಯಾಗಮೇ ಪ್ರಲೀಯನ್ತೇ ತತ್ರೈವಾವ್ಯಕ್ತ ಸಂಜ್ಞಕೇ॥**

ಸಾವಿರಯುಗಗಳು ದೇವರ ಹಗಲು ಕಾಲದಲ್ಲಿ ಈ ಪ್ರಪಂಚವೆಲ್ಲಾ ಜೀವನ ವಿಧಾನ ಸಾಗಿಸುತ್ತಿರುವುದು. ಹಾಗೆ ಸಾವಿರಯುಗಗಳ ರಾತ್ರಿ ಕಾಲದಲ್ಲಿ ಮೊತ್ತವು ವಿಶ್ವವೇ ಇರುವುದಿಲ್ಲ. ದೇವರ ಹಗಲು ಪ್ರಾರಂಭದಲ್ಲಿ ವಿಶ್ವವು ಸೃಷ್ಠಿಸಲ್ಪಡುತ್ತದೆ, ಅದನ್ನೇ ಪ್ರಭವ ಎನ್ನುತ್ತೇವೆ. ಹಾಗೆ ದೇವರ ರಾತ್ರಿ ಪ್ರಾರಂಭದಲ್ಲಿ ಸೃಷ್ಠಿಸಲ್ಪಟ್ಟ ವಿಶ್ವವೆಲ್ಲಾ ಇಲ್ಲದೇ ಹೋಗುವುದು. ಅದನ್ನೇ ಪ್ರಳಯ ಎನ್ನುತ್ತೇವೆ. ಒಂದುಬಾರಿ ವಿಶ್ವವು ಸೃಷ್ಠಿಸಲ್ಪಟ್ಟ ನಂತರ ಸಾವಿರ ಯುಗಗಳಿಗೆ ವಿಶ್ವವು ಪ್ರಳಯ ಹೊಂದುವುದನ್ನು ಒಂದು ಕಲ್ಪ ಎನ್ನುತ್ತೇವೆ. ಒಂದು ಕಲ್ಪದ ಪೂರ್ತಿಕಾಲ ಎರಡು ಸಾವಿರ ಯುಗಗಳೆಂದು ತಿಳಿಯುತ್ತಿದೆ. ದೇವರ ಒಂದು ಹಗಲು, ಒಂದು ರಾತ್ರಿ ಎರಡೂ ಎರಡು ಸಾವಿರ ಯುಗಗಳು. ಒಂದು ಹಗಲು ಒಂದು ರಾತ್ರಿ ಸೇರಿ ಒಂದು ದಿನವಾಗುತ್ತದೆ. ದೇವರಿಗೆ ಒಂದು ದಿನ ಪೂರ್ತಿ ಆದರೆ ಅದನ್ನು ಒಂದು ಕಲ್ಪ ಎನ್ನುತ್ತೇವೆ. ಇದೆಲ್ಲಾ ಕಲ್ಪಿತ ಕಥೆಯಾಗಿ ಹೇಳಿದ ವಿಷಯವಲ್ಲ. ಇದೆಲ್ಲಾ ಪೂರ್ತಿ ಶಾಸ್ತ್ರಬದ್ಧವಾದ ವಿಷಯ. ಇದೆಲ್ಲಾ ಶಾಸ್ತ್ರಬದ್ಧ ಎನ್ನುವುದಕ್ಕೆ ಈಗ ನಡೆಯುತ್ತಿರುವ ಕಲಿಯುಗವೇ ಪ್ರತ್ಯಕ್ಷ ಪ್ರಮಾಣ. ಸೃಷ್ಠಿ ಪ್ರಭವ, ಪ್ರಳಯಗಳಿಗೆ ಗೀತೆಯಲ್ಲಿ ಭಗವಂತನು ಹೇಳಿದ ಮೇಲಿನ ಎರಡು

ಶ್ಲೋಕಗಳೇ ಅಧಾರ. ಅಷ್ಟೇ ಅಲ್ಲದೆ ಪ್ರತಿ ಜೀವರಾಶಿ ತಲೆ ಮಧ್ಯಭಾಗದಲ್ಲಿ ಕಾಣಿಸದ ಬ್ರಹ್ಮಚಕ್ರವೊಂದಿದೆ. ಆ ಬ್ರಹ್ಮಚಕ್ರವು ಎರಡು ಭಾಗಗಳಾಗಿ ವಿಭಜಿಸಲಾಗಿದೆ. ಆ ಬ್ರಹ್ಮ ಚಕ್ರ ಕಾಲದೊಂದಿಗೆ ತಿರುಗುತ್ತಿದೆ. ಆ ಚಕ್ರದಲ್ಲಿನ ಎರಡು ಭಾಗಗಳು ಪೂರ್ತಿಯಾಗಿ ಒಂದು ಸುತ್ತು ತಿರುಗುವುದಕ್ಕೆ ಎರಡು ಸಾವಿರ ಯುಗಗಳು ಬೇಕಾಗುತ್ತದೆ. ಬ್ರಹ್ಮಚಕ್ರದಲ್ಲಿನ ಎರಡು ಭಾಗಗಳಲ್ಲಿ ಒಂದು ಭಾಗ ದೇವರ ಹಗಲಾಗಿ, ಮತ್ತೊಂದು ಭಾಗ ದೇವರ ರಾತ್ರಿಯಾಗಿ ಗುರುತಿಸಲ್ಪಟ್ಟಿದೆ. ಬ್ರಹ್ಮಚಕ್ರದ ಒಂದು ಗಮನ ಒಂದು ಭಾಗ ತಿರುಗುವುದಕ್ಕೆ ಸಾವಿರ ಯುಗಗಳು ಬೇಕಾಗುತ್ತದೆ. ಲೆಕ್ಕದ ಪ್ರಕಾರ ನಾಲ್ಕು ಯುಗಗಳು ಸೇರಿದ ಮಹಾಯುಗಗಳು 250 ಬಾರಿ ನಡೆದರೆ ಸಾವಿರ ಯುಗಗಳು ಆಗುತ್ತವೆ. ಸಾವಿರ ಯುಗಗಳು ನಡೆಯುವುದಕ್ಕೆ ಪೂರ್ತಿಯಾಗಿ 108 ಕೋಟಿ ಸಂವತ್ಸರಗಳಾಗುತ್ತದೆ. ಇದರ ಪ್ರಕಾರ ವಿಶ್ವದ ಒಂದು ಆಯುಸ್ಸು 108 ಕೋಟಿ ಸಂವತ್ಸರಗಳೆಂದು ಶಾಸ್ತ್ರಬದ್ಧವಾಗಿ ತಿಳಿಯುತ್ತದೆ. ದೇವರಿಗೆ ಹಗಲು ಕಾಲ 108 ಕೋಟಿ ಸಂವತ್ಸರಗಳೆ ಅಲ್ಲದೆ, ರಾತ್ರಿ ಕಾಲವು ಸಹ 108 ಕೋಟಿ ಸಂವತ್ಸರಗಳೆಂದು ಹೇಳಬಹುದು. ಒಟ್ಟು 216 ಕೋಟಿ ಸಂವತ್ಸರಗಳ ಕಾಲ ದೇವರಿಗೆ ಒಂದು ದಿನವಾಗುತ್ತದೆಂದು ಬ್ರಹ್ಮವಿದ್ಯಾ ಶಾಸ್ತ್ರಪ್ರಮಾಣವಾಗಿ ಹೇಳಬಹುದು.

ವಿಶ್ವವೆಲ್ಲಾ ಸೃಷ್ಠಿಯಾಗಿರುವುದು ಜೀವಿಗಳಿಗಾಗಿಯೇ. ಜೀವಿಗೋಸ್ಕರ ದೇವರು ಮಾಡಿರುವುದೇ ವಿಶ್ವಸೃಷ್ಠಿ. ವಿಶ್ವಕ್ಕೆ ಆಯಸ್ಸು 108 ಕೋಟಿ ಸಂವತ್ಸರ ಗಳೆಂದು ಹೇಳಿಕೊಂಡಿದ್ದೇವೆ ಅಲ್ಲವೆ! 108 ಕೋಟಿ ಸಂವತ್ಸರಗಳ ಕ್ರಮ ಪದ್ದತಿಗಾಗಿ ಬ್ರಹ್ಮಚಕ್ರವೆನ್ನುವುದು ಇದೆಯೆಂದು ಸಹ ಹೇಳಿಕೊಂಡಿದ್ದೇವೆ. ವಿಶ್ವ, ವಿಶ್ವದ ಒಂದು ಆಯುಷ್ಷೇ ಅಲ್ಲದೆ ಜೀವಿಗಳು, ಜೀವಿಗಳ ಗುಣಗಳು, ಜೀವಿಗಳ ಕರ್ಮಗಳು, ಕರ್ಮಗಳು ಅನುಭವಕ್ಕೆ ಬರುವ ಕಾಲಗಳು ಎಲ್ಲ ನಿರ್ಣಯಿಸಲ್ಪಟ್ಟಿವೆ. ಶರೀರದಲ್ಲಿಯೇ ಜೀವಾತ್ಮ ನಿವಾಸಿಸುತ್ತಾನೆಂದು ಎಲ್ಲರಿಗೂ ತಿಳಿದಿದೆ. ಆದರೆ ಎಲ್ಲಿ ನಿವಾಸಿಸುತ್ತಾನೆಂದು ಮಾತ್ರ ದೊಡ್ಡ ಆಧ್ಯಾತ್ಮಿಕ ತಜ್ಞರಿಗೂ

ಸಹ ತಿಳಿದಿಲ್ಲ. ಅದನ್ನು ವಿವರವಾಗಿ ತಿಳಿದುಕೊಂಡರೆ ಬ್ರಹ್ಮ ಚಕ್ರದ ಕೆಳಗೆ ಕಾಲಚಕ್ರವಿದೆ. ಕಾಲಚಕ್ರದ ಕೆಳಗೆ ಕರ್ಮಚಕ್ರವಿದೆ. ಕರ್ಮ ಚಕ್ರದ ಕೆಳಗೆ ಗುಣಚಕ್ರವಿದೆ. ಈ ಬ್ರಹ್ಮ, ಕಾಲ, ಕರ್ಮ, ಗುಣ ಎನ್ನುವ ನಾಲ್ಕು ಚಕ್ರಗಳು ಬ್ರಹ್ಮನಾಡಿಯಲ್ಲಿನ ಆತ್ಮವನ್ನು ಆಧಾರ ಮಾಡಿಕೊಂಡು ಒಂದರ ಕೆಳಗೆ ಒಂದು ಹೊಂದಿಸಿರುತ್ತವೆ. ನಾಲ್ಕು ಚಕ್ರಗಳ ಸಮುದಾಯವು ನಮ್ಮ ತಲೆ ಮಧ್ಯಭಾಗದಲ್ಲಿ ಹೇಗೆ ಇದೆಯೊ ಚಿತ್ರರೂಪದಲ್ಲಿ ಕೆಳಗೆ ನೋಡಬಹುದು.

ಎಲ್ಲದಕ್ಕಿಂತ ಕೆಳಗಿರುವ ಗುಣಚಕ್ರದ ಮೊತ್ತವು ನಾಲ್ಕು ಭಾಗಗಳಾಗಿ ಇದೆ. ಅದರಲ್ಲಿ ಹೊರಗೆ ಮೂರು ಭಾಗಗಳಲ್ಲಿ ಗುಣಗಳಿರುತ್ತವೆ. ಮಧ್ಯದಲ್ಲಿನ ಭಾಗದಲ್ಲಿ ಗುಣಗಳಿರುವುದಿಲ್ಲ. ಅದರಲ್ಲಿ ಆತ್ಮ ಇರುತ್ತದೆ. ಗುಣಚಕ್ರಗಳಲ್ಲಿನ ನಾಲ್ಕು ಭಾಗಗಳನ್ನು ಎರಡು ವಿಧಗಳಾಗಿ ವಿಭಜಿಸಿ ಹೇಳಬಹುದು. ಒಂದು ಗುಣಗಳಿರುವ ಭಾಗಗಳು, ಎರಡು ಗುಣಗಳಿಲ್ಲದ ಭಾಗ ಎಂದು ಎರಡು ವಿಧಗಳಲ್ಲಿ ವಿಭಜಿಸಬಹುದು. ಗುಣಚಕ್ರವನ್ನು ಮಾಯಾಚಕ್ರವೆಂದು ಸಹ ಹೇಳಬಹುದು, ಹಾಗೆ ಹೇಳುವುದಕ್ಕೆ ಭಗವದ್ಗೀತೆಯಲ್ಲಿನ ವಿಜ್ಞಾನ ಯೋಗದಲ್ಲಿ




**ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳು**

14ನೇ ಶ್ಲೋಕದಲ್ಲಿ ***"ಗುಣಮಯಿ ಮಮ ಮಾಯಾ"*** ಎಂಬ ವಾಕ್ಯವೇ ಕಾರಣ. ಆ ವಾಕ್ಯದ ಪ್ರಕಾರ ನನ್ನ ಮಾಯೆ ಗುಣಗಳಿಂದ ಕೂಡಿಕೊಂಡು ಇದೆಯೆಂದು, ಅಥವಾ ಮಾಯೆ ಗುಣರೂಪದಲ್ಲಿ ಇದೆಯೆಂದು ದೇವರು ಹೇಳಿದ್ದಾನೆ. ಆದ್ದರಿಂದ ಗುಣಚಕ್ರದಲ್ಲಿನ ಗುಣಗಳನ್ನೇ ಮಾಯೆ ಎನ್ನುತ್ತಿದ್ದೇವೆ. ಗುಣಗಳನ್ನು ಮಾಯೆ ಎಂದಾಗ ಗುಣಚಕ್ರವನ್ನು ಮಾಯೆ ಚಕ್ರವೆಂದು ಹೇಳಬಹುದು. ಗುಣಚಕ್ರದಲ್ಲಿನ ನಾಲ್ಕು ಭಾಗಗಳಲ್ಲಿ ಜೀವಾತ್ಮನು ವಾಸವಿರುತ್ತಾನೆ. ಆದರೆ ಶರೀರವನ್ನು ಧರಿಸಿದಾಗಿನಿಂದ ಗುಣಗಳಿರುವ ಮೂರು ಭಾಗಗಳಲ್ಲಿಯೇ ಇದ್ದಾನೆ. ಗುಣಗಳಿಲ್ಲದ ಭಾಗದೊಳಗೆ ಜೀವಿಯು ಗಟ್ಟಿ ಪ್ರಯತ್ನ ಮಾಡಿದರೆ ಹೋಗಬಲ್ಲನು. ಜೀವಿಯು ಗುಣರಹಿತ ಭಾಗವಾದ, ಆತ್ಮ ವಾಸವಿರುವ ಭಾಗದೊಳಗೆ ಹೋಗಬೇಕೆಂದು ಅಂದುಕೊಳ್ಳುವುದಿಲ್ಲ. ಆದ್ದರಿಂದ ಜೀವಿಯು ಗುಣಗಳಿರುವ ಮೂರು ಭಾಗಗಳಲ್ಲಿಯೇ ಯಾವುದೋ ಒಂದು ಭಾಗದಲ್ಲಿ ಎಲ್ಲ ಕಾಲವು ವಾಸಿಸುತ್ತಾನೆ. ಗುಣಚಕ್ರ ಮೂರು ಮತ್ತು ಒಂದು ಒಟ್ಟು ನಾಲ್ಕು ಭಾಗಗಳಾಗಿ ಇದೆಯೆಂದು ಹೇಳಿಕೊಂಡಿದ್ದೇವಲ್ಲವೆ! ಗುಣಗಳಿರುವ ಮೂರು ಭಾಗಗಳು ಹೊರಗಿನಿಂದ ಕ್ರಮವಾಗಿ, ಒಂದು ತಾಮಸ ಗುಣಭಾಗ, ಎರಡು ರಾಜಸ ಗುಣಭಾಗ, ಮೂರು ಸಾತ್ವಿಕ ಗುಣಭಾಗ ಎಂಬ ಹೆಸರುಗಳಿಂದ ಇವೆ. ಇನ್ನು ಮಧ್ಯದಲ್ಲಿ ಉಳಿದಿರುವ ನಾಲ್ಕನೇ ಭಾಗ ಗುಣರಹಿತವಾದ ಭಾಗ. ಅದನ್ನು ಆತ್ಮ ಭಾಗವೆಂದು ಅಥವಾ ಯೋಗ ಭಾಗವೆಂದು ಹೇಳುತ್ತಿದ್ದೇವೆ. ಜೀವಾತ್ಮನು ನಾಲ್ಕನೆ ಭಾಗದೊಳಗೆ ಬಂದಾಗ ಯೋಗವಾಗುತ್ತದೆ. ಆದ್ದರಿಂದ ಅದನ್ನು ಯೋಗಭಾಗವೆನ್ನುತ್ತಿದ್ದೇವೆ. ಗುಣಚಕ್ರ ಹೇಗಿದೆಯೋ ನಂತರ ಪುಟದಲ್ಲಿ ನೋಡಬಹುದು.

ಮಾಯೆಚಕ್ರ ಅಥವಾ ಗುಣಚಕ್ರದಲ್ಲಿ ಗುಣಗಳಿರುವ ಒಂದೊಂದು ಭಾಗದಲ್ಲಿ ಹನ್ನೆರಡು ಗುಣಗಳು ಇವೆ. ತಾಮಸದಲ್ಲಿ 12, ರಾಜಸದಲ್ಲಿ 12, ಸಾತ್ವಿಕದಲ್ಲಿ 12 ಗುಣಗಳು ಎರಡು ವಿಧಗಳಾಗಿ ಇವೆ. 12 ಗುಣಗಳಲ್ಲಿ ಆರು ಒಂದು ವಿಧವಾಗಿದ್ದು, ಉಳಿದ ಆರು ಮತ್ತೊಂದು ವಿಧವಾಗಿ ಇವೆ. ಮೊದಲ




**ಗುಣಚಕ್ರ**

ವಿಧದ ಆರು ಗುಣಗಳು ಜೀವಿಗೆ ಪಾಪವನ್ನು ಒದಗಿಸುವ ಕೆಟ್ಟ ಗುಣಗಳಾಗಿದ್ದು, ಉಳಿದ ಆರು ಗುಣಗಳು ಜೀವಿಗೆ ಪುಣ್ಯವನ್ನು ಒದಗಿಸುವ ಒಳ್ಳೆಯ ಗುಣಗಳಾಗಿ ಇವೆ. ಒಂದೇ ಗುಣಭಾಗದಲ್ಲಿ ಇತ್ತ ಮಾಯೆ, ಅತ್ತ ಮಾಯೆ ಎನ್ನುವಂತೆ ಇತ್ತ ಒಳ್ಳೆಯ ಗುಣಗಳು ಅತ್ತ ಕೆಟ್ಟ ಗುಣಗಳು ಎರಡು ವಿಧಗಳು ಇವೆ. ಗುಣ ಭಾಗದೊಳಗಿನ ಆರು ಕೆಟ್ಟ ಗುಣಗಳನ್ನು ಅರಿಷಡ್ ವರ್ಗ ಎಂದು ಅನ್ನುತ್ತಾರೆ. ಅರಿ ಎಂದರೆ ಶತ್ರು ಎಂದರ್ಥ. ಷಟ್ ಎಂದರೆ ಆರು ಎಂದು, ವರ್ಗಎಂದರೆ ಗುಂಪು ಎಂದರ್ಥ. ಅರಿಷಡ್ ವರ್ಗ ಎಂದರೆ ಆರು ಶತ್ರುಗಳ ಗುಂಪು ಎಂದು ಅರ್ಥ. ಹಾಗೆ ಉಳಿದ ಆರುಗುಣಗಳನ್ನು ಮಿತ್ರ ಷಟ್ವರ್ಗ ಎನ್ನುತ್ತಾರೆ. ಆರು ಮಿತ್ರರ ಗುಂಪು ಎಂದು ಅದರ ಅರ್ಥ. ಈ ಹನ್ನೆರಡು ಗುಣಗಳು ಯಾರಿಗೆ ಮಿತ್ರರು, ಯಾರಿಗೆ ಶತ್ರುಗಳು ಎಂಬ ಪ್ರಶ್ನೆಗೆ ಉತ್ತರವಾಗಿ, ಜೀವಾತ್ಮನಿಗೆ ಆರು ಶತ್ರುಗುಣಗಳು, ಆರು ಮಿತ್ರಗುಣಗಳಾಗಿ ಇವೆಯೆಂದು ಹೇಳಬಹುದು. ಮೂರು ಗುಣಭಾಗಗಳಲ್ಲಿಯೂ ಮಿತ್ರ ಶತ್ರು ಗುಣಗಳಿದ್ದು, ನಾಲ್ಕನೇ ಭಾಗದಲ್ಲಿ ಮಾತ್ರ ಯಾವ ಗುಣಗಳು ಇಲ್ಲ. ಇದೆಲ್ಲವೂ ಜೀವಿಗಾಗಿ ದೇವರು ಏರ್ಪಾಟು ಮಾಡಿಟ್ಟ ಯಂತ್ರಾಂಗವು.

ಗುಣಚಕ್ರದಲ್ಲಿನ (ಮಾಯೆ ಚಕ್ರದಲ್ಲಿನ) ಮೂರು ಭಾಗಗಳಲ್ಲಿನ ಒಂದೊಂದು ಭಾಗದಲ್ಲಿ ಹನ್ನೆರಡು ಗುಣಗಳಿವೆಯೆಂದು ಹೇಳಿಕೊಂಡಿದ್ದೇವೆ

ಅಲ್ಲವೆ! ಆ ಹನ್ನೆರಡರಲ್ಲಿ ಆರು ಶತ್ರು ಗುಣಗಳು, ಆರು ಮಿತ್ರ ಗುಣಗಳಿವೆಯೆಂದು ಸಹ ಹೇಳಿಕೊಂಡಿದ್ದೇವೆ. ಇವುಗಳಿಂದಲೇ ಪಾಪ ಪುಣ್ಯಗಳು ಬರುತ್ತವೆಂದು ಸಹ ಹೇಳಿಕೊಂಡಿದ್ದೇವೆ. ಈ ವಿಧಾನ ಬಹು ರಹಸ್ಯವಾದದ್ದು. ಯಾವ ಮತದಲ್ಲಾಗಲಿ ಇಲ್ಲಿಯವರೆಗು ಯಾರೂ ಹೇಳದಿರುವುದು, ಆದ್ದರಿಂದ ಬಹಳ ಜಾಗ್ರತೆಯಿಂದ ಕೇಳಬೇಕೆಂದು ತಿಳಿಸುತ್ತಿದ್ದೇನೆ. ಒಂದು ಭಾಗದ ಆರು ಶತ್ರು ಗುಣಗಳು ಕ್ರಮವಾಗಿ ಹೀಗಿವೆ. 1) ಕಾಮ 2) ಕ್ರೋಧ 3) ಲೋಭ 4) ಮೋಹ 5) ಮದ 6) ಮತ್ಸರ ಎನ್ನುವ ಹೆಸರುಗಳಿಂದ ಇವೆ. ವಿವರವಾಗಿ ಹೇಳಿದರೆ, ಕಾಮ ಎಂದರೆ ಶೃಂಗಾರಕ್ಕೆ ಸಂಬಂಧಿಸಿರುವುದು, ಹೆಣ್ಣು ಗಂಡಿಗೆ ಸಂಬಂಧಿಸಿರುವುದೆಂದು ಅಂದುಕೊಳ್ಳಬಾರದು. ಕಾಮ ಎಂದರೆ ಆಸೆ ಎಂದು ಅರ್ಥ. ಅದು ಯಾವ ಆಸೆ ಆದರೂ ಆಗಬಹುದು. ಯಾವುದರ ಮೇಲೆ ಆಸೆಯಾದರೂ ಆಗಬಹುದು. ಹಣ ಬೇಕೆಂದುಕೊಳ್ಳುವುದು ಆಸೆಯೇ ಅಲ್ಲವೆ! ಅದನ್ನು ಕಾಮ ಗುಣ ಎನ್ನಬಹುದು. ಹಾಗೆ ಇಂತಹ ಸ್ತ್ರೀ ಸಾಂಗತ್ಯ ಬೇಕೆಂದುಕೊಳ್ಳುವುದು ಸಹ ಆಸೆಯೇ ಆಗುತ್ತದೆ. ಆದ್ದರಿಂದ ಅದನ್ನು ಸಹ ಕಾಮ ಗುಣವೆಂದೇ ಹೇಳಬಹುದು. ಈ ವಿಧವಾಗಿ ಒಂದು ಗುಣದಲ್ಲಿನ ಉದ್ದೇಶವನ್ನು ಅನುಸರಿಸಿ ಅದು ಮನುಷ್ಯ ಜೀವನದಲ್ಲಿ ಎಲ್ಲಿ ಹೇಗೆ ಉಪಯೋಗಪಡುತ್ತದೋ ಗುರುತಿಸಬಹುದು. ಮನುಷ್ಯನ ಪ್ರವರ್ತ ನೆಯನ್ನನು ಸರಿಸಿ ಆ ಪ್ರವರ್ತನೆ ಯಾವ ಗುಣಕ್ಕೆ ಸಂಬಂಧಿಸಿದ್ದೊ ತಿಳಿಯ ಬಹುದು. ಎರಡನೇ ಗುಣವಾದ ಕ್ರೋಧ ಎಂದರೆ ಕೋಪ. ಅದು ಮನುಷ್ಯನ ಶರೀರದಲ್ಲಿ ಹೇಗೆ ಇದೆಯೋ ತಿಳಿಯದಿದ್ದಾಗ ಅದರ ಕಾರ್ಯಾಚರಣೆ ಹೊರಗೆ ಮನುಷ್ಯನಲ್ಲಿ ಕಾಣಿಸುತ್ತದೆ. ಆಗ ಮನುಷ್ಯನಲ್ಲಿನ ಜೀವಾತ್ಮನು ಕೋಪ ಗುಣಕ್ಕೆ ಸಿಕ್ಕಿಕೊಂಡಿದ್ದಾ ನೆಂದು ಅರ್ಥ ಮಾಡಿಕೊಳ್ಳಬಹುದು. ಈ ವಿಧವಾಗಿ ಗುಣಗಳೆಲ್ಲವನ್ನು ಗುರುತಿಸಬಹುದು. ಮೂರನೆಯದಾದ ಲೋಭ ಗುಣ ಜೀವಾತ್ಮನನ್ನು ಅಂಟಿಕೊಂಡಾಗ ಅವನು ಲೋಭಿಯಾಗಿ ಬದಲಾಗುತ್ತಾನೆ. ಅವನಲ್ಲಿ ಜಿಪುಣತನ ಬೆಳೆದು ಹೋಗುತ್ತದೆ. ಅಂತಹ ಜಿಪುಣ ಗುಣವಿರುವ ವರನ್ನು ಬಹಳಕಡೆ ನೋಡಬಹುದು. ಇನ್ನು ನಾಲ್ಕನೆಯದಾದ ಮೋಹಗುಣ ಮನುಷ್ಯರಲ್ಲಿ ನನ್ನದು,

ನನ್ನವರು, ನಾನು ಎಂಬ ಭಾವನೆಯನ್ನು ಕಲ್ಪಿಸುತ್ತದೆ. ಇದು ಮನುಷ್ಯನಲ್ಲಿ ಗುರುತಿಸಲಾಗದಷ್ಟು ಕೆಲಸ ಮಾಡುತ್ತಿರುತ್ತದೆ. ಭಾರತ ಯುದ್ಧದಲ್ಲಿ ಅರ್ಜುನನಿಗೆ ಈ ಮೋಹಗುಣ ಬಂದಿರುವುದರಿಂದ ನಾನು ಯುದ್ದ ಮಾಡುವುದಿಲ್ಲ, ನನ್ನವರನ್ನು ಸಾಯಿಸುವುದಿಲ್ಲ ಎಂದಿದ್ದಾನೆ. ಇದನ್ನು ಬಹಳಜನ ಅರ್ಥ ಮಾಡಿಕೊಳ್ಳದೆ ಪ್ರೇಮ ಗುಣವಾಗಿ ಭಾವಿಸಿಕೊಳ್ಳುತ್ತಿದ್ದರು. ಪ್ರೇಮ ಗುಣಬೇರೆ, ಅದರ ಕೆಲಸಬೇರೆ. ಹಾಗೆ ಮೋಹಗುಣಬೇರೆ ಅದರ ಕೆಲಸ ಬೇರೆಯೆಂದು ತಿಳಿಯಬೇಕು. ಇನ್ನು ಐದನೇ ಗುಣ ಮಧ. ಮಧ ಎಂದರೆ ಗರ್ವ ಎಂದು ಅರ್ಥ. ನಾನು ಇಂತಹವನು ಎಂದು ತನ್ನನ್ನು ತಾನು ದೊಡ್ಡದಾಗಿ ಅಂದು ಕೊಳ್ಳುವುದನ್ನು ಗರ್ವ ಎನ್ನುತ್ತೇವೆ. ಬಹಳಜನ ಮಧ ಎಂದರೆ ಮನುಷ್ಯನಲ್ಲಿನ ಕೊಬ್ಬು ಎಂದು ಅಂದುಕೊಳ್ಳುತ್ತಿದ್ದಾರೆ. ಮುಖ್ಯವಾಗಿ ಗಮನಿಸಬೇ ಕಾಗಿರುವು ದೇನೆಂದರೆ ಶರೀರದಲ್ಲಿನ ಯಾವ ಭಾಗದಿಂದ ಸಂಬಂಧ ಇಲ್ಲದೆ ಪ್ರತ್ಯೇಕವಾಗಿ ಇರುವವು ಗುಣಗಳು. ಶರೀರ ಭಾಗಗಳು ಬೇರೆ, ಗುಣಗಳು ಬೇರೆಯೆಂದು ತಿಳಿಯಬೇಕು. ಕೆಲವರು ಬೋಧಕರು ಗುರುಗಳಾಗಿ ಚಲಾವಣೆ ಆಗುತ್ತಾ ಆಧ್ಯಾತ್ಮಿಕ ಕೋರ್ಸ್ ಗಳು, ಕ್ಲಾಸ್‌ಗಳನ್ನು ಏರ್ಪಾಟು ಮಾಡಿ, ಅದರಲ್ಲಿ ಒಂದು ಬೋರ್ಡಿನಲ್ಲಿ ಗುಣಗಳನ್ನು ಕುರಿತು ಬರೆಯುತ್ತಾ ಹೀಗೆ ಬರೆದಿಟ್ಟಿದ್ದಾರೆ. "ಗುಣಗಳು ಐದು. ಕಾಮ, ಕ್ರೋಧ, ಲೋಭ, ಮೋಹ, ಅಹಂ" ಎಂದು ಚಾರ್ಟಿನಲ್ಲಿ ಬರೆದು ಗೋಡೆಗೆ ಅಂಟಿಸಿದ್ದಾರೆ. ಅಹಂ ಎನ್ನುವುದು ಗುಣ ಅಲ್ಲವೇ ಅಲ್ಲ. ಅದು ಶರೀರದಲ್ಲಿ 25 ಭಾಗಗಳಲ್ಲಿ ಒಂದು ಸೂಕ್ಷ್ಮಭಾಗ. ಹೆಸರು ಹೊಂದಿದ ಬೋಧಕರು ಆಧ್ಯಾತ್ಮಿಕವನ್ನು ಬೋಧಿಸುತ್ತಾ ಅಹಂನ್ನು ಗುಣವೆಂದು ಹೇಳುತ್ತಿದ್ದಾರೆಂದರೆ ಎಷ್ಟು ವಿಚಿತ್ರ! ಮಧ ಎನ್ನುವುದು ನಾನು ಇಂತಹವನು ಎನ್ನುವ ಭಾವವನ್ನು ಕಲ್ಪಿಸುವಂತದ್ದು. ಅದನ್ನೇ ಗರ್ವ ಎನ್ನುತ್ತೇವೆ. ಇದು ಪ್ರತಿ ಮನುಷ್ಯನಲ್ಲಿಯೂ ಕಾಣಿಸುತ್ತದೆ. ಪ್ರತ್ಯೇಕಿಸಿ ಉದ್ಯೋಗ ದರ್ಪ ಇರುವವರು ತನ್ನನ್ನು ತಾನು ಮರೆತು ಹೋಗಿ ತನ್ನ ದರ್ಪವನ್ನೇ ತಾನಾಗಿ ನೆನೆಸುತ್ತಾ ಗರ್ವಗುಣದಿಂದ ಪ್ರತಿ ಕ್ಷಣ ತುಂಬಿಹೋಗಿರುತ್ತಾರೆ. ಇವು ಪಾಪವನ್ನು ಅಂಟಿಸುವ ಗುಣಗಳೆಂದು ಬಹಳಜನಕ್ಕೆ ತಿಳಿದಿಲ್ಲ. ಇನ್ನು ಕೊನೆಯ ಗುಣ

ಮತ್ಸರ. ಇದನ್ನೇ ಅಸೂಯೆ ಎಂದು ಹೇಳಬಹುದು. ಇದು ತನಗೆ ಸಂಬಂಧವಿಲ್ಲದವನ ಮೇಲೂ ಸಹ ಕೆಲಸ ಮಾಡುತ್ತಾ, ಇತರರನ್ನು ಇತರ ಅಭಿವೃದ್ದಿಯನ್ನು ನೋಡಿ ಸಹಿಸಲಾರದ ಸ್ಥಿತಿಯನ್ನು ಕಲ್ಪಿಸುತ್ತದೆ. ಈ ಅಸೂಯೆ ಇತರರನ್ನು, ಕೆಟ್ಟುಹೋಗುವಂತೆ, ಅವರಿಗೆ ನಷ್ಟವನ್ನು ಕಷ್ಟವನ್ನು ಹೊಂದುವಂತೆ ಮಾಡುತ್ತದೆ. ಒಟ್ಟಾರೆ ಈ ಆರು ಗುಣಗಳು ಜೀವಾತ್ಮನಿಗೆ ಶತ್ರುಗಳಿಗೆ ಸಮಾನ. ಆದ್ದರಿಂದ ಇವುಗಳನ್ನು ಶತ್ರುಗುಣಗಳ ಗುಂಪು ಎಂದಿದ್ದಾರೆ. ಒಳಗಿನ ಗುಣಗಳೇ ಹೊರಗಿನ ಶತ್ರುಗಳನ್ನು ತಯಾರು ಮಾಡುತ್ತಿವೆ. ಅಷ್ಟೇ ಅಲ್ಲದೆ ಈ ಆರು ಗುಣಗಳು ಜೀವಿಗೆ ಪಾಪವನ್ನು ಅಂಟಿಸುತ್ತಿವೆ.

ಜೀವಿಗೆ ಶತ್ರು ಗುಣಗಳಾದ ಆರು ಗುಣಗಳ ವಿವರವನ್ನು ತಿಳಿದು ಕೊಂಡಿದ್ದೇವೆ. ನಂತರ ಆರು ಮಿತ್ರಗುಣಗಳನ್ನು ಕುರಿತು ತಿಳಿದುಕೊಳ್ಳೋಣ. ಮಿತ್ರಗುಣಗಳನ್ನು ಕುರಿತು ಯಾರೂ ಹೇಳಿಲ್ಲ. ಮೊದಲಬಾರಿ ಇಲ್ಲಿಂದಲೇ ಹೇಳುತ್ತಿದ್ದೇವೆ. ಆದ್ದರಿಂದ ಸಾವಧಾನವಾಗಿ ತಿಳಿದುಕೊಳ್ಳಬೇಕೆಂದು ಹೇಳುತ್ತಿದ್ದೇವೆ. ಶತ್ರು ಗುಣಗಳಾದ ಕಾಮ, ಕ್ರೋಧ, ಲೋಭ, ಮೋಹ, ಮಧ, ಮತ್ಸರ ಎಂಬ ಗುಣಗಳಿಗೆ ಪೂರ್ತಿ ವಿರುದ್ದವಾದವುಗಳೆ ಜೀವಿಯ ಮಿತ್ರ ಗುಣಗಳು. ಆ ಲೆಕ್ಕದ ಪ್ರಕಾರ ಕಾಮ (ಆಸೆ) ಎಂಬ ಗುಣಕ್ಕೆ ವಿರುದ್ದವಾದ ದಾನ ಗುಣ ಮಿತ್ರ ಗುಣಗಳಲ್ಲಿ ಮೊದಲ ಸ್ಥಾನದಲ್ಲಿ ಇದೆ. ಅದೇ ವಿಧವಾಗಿ ಶತ್ರು ಗುಣಗಳಲ್ಲಿ ಎರಡನೆಯದಾದ ಕ್ರೋಧ (ಕೋಪ) ಎಂಬ ಗುಣಕ್ಕೆ ಪೂರ್ತಿ ವಿರುದ್ದವಾದುದು ದಯಾಗುಣ. ಹಾಗೆ ಲೋಭ ಎಂಬ ಗುಣಕ್ಕೆ ವಿರುದ್ದವಾದುದು ಔದಾರ್ಯಗುಣ. ಮೋಹ ಗುಣಕ್ಕೆ ವಿರುದ್ದವಾದುದು ವೈರಾಗ್ಯ ಗುಣ. ಮಧ ಎಂಬ ಗುಣಕ್ಕೆ ವಿರುದ್ದವಾದುದು ವಿನಯ ಎಂಬ ಗುಣ. ಕೊನೆಯ ಮತ್ಸರ ಗುಣಕ್ಕೆ ವಿರುದ್ದವಾದುದು ಪ್ರೇಮಗುಣ. ಈ ವಿಧವಾಗಿ ಜೀವಿಗೆ ಪಾಪವನ್ನು ಅಂಟಿಸುವ ಆರು ಗುಣಗಳಿಗೆ ಪೂರ್ತಿಯಾಗಿ ವಿರುದ್ದವಾದ ಗುಣಗಳು ಕ್ರಮವಾಗಿ ದಾನ, ದಯೆ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮ ಗುಣಗಳು. ವಿವರವಾಗಿ ಬರೆದುಕೊಂಡರೆ ಕಾಮ X ದಾನ, ಕ್ರೋಧ X ದಯೆ, ಲೋಭ

X ಔದಾರ್ಯ, ಮೋಹ X ವೈರಾಗ್ಯ, ಮಧ X ವಿನಯ, ಮತ್ಸರ X ಪ್ರೇಮ. ಈ ವಿಧವಾಗಿ ಆರು ಶತ್ರುಗುಣಗಳಿಗೆ ಪೋಟಿಯಾಗಿ ಆರು ಮಿತ್ರ ಗುಣಗಳು ಗುಣಚಕ್ರದಲ್ಲಿ ನೆಲೆಗೊಳಿಸಲಾಗಿವೆ. 1) ದಾನ 2) ದಯೆ 3) ಔದಾರ್ಯ 4) ವೈರಾಗ್ಯ 5) ವಿನಯ 6) ಪ್ರೇಮಗಳು ಪೂರ್ತಿಯಾಗಿ ಜೀವಿಗೆ ಪುಣ್ಯವನ್ನು ಕೈಗೂಡಿಸುತ್ತಿವೆ. ಶತ್ರುಗುಣಗಳು ಜೀವಿಗೆ ಪಾಪವನ್ನು ಕೊಟ್ಟರೆ, ಮಿತ್ರಗುಣಗಳು ಜೀವಿಗೆ ಪುಣ್ಯವನ್ನು ಕೊಡುತ್ತವೆ. ಪಾಪದಿಂದ ಕಷ್ಟಗಳು, ಪುಣ್ಯದಿಂದ ಸುಖಗಳು ಮನುಷ್ಯನ ಜೀವನದಲ್ಲಿ ಏರ್ಪಡುತ್ತವೆ. ಎರಡು ವಿಧಗಳ ಗುಣಗಳನ್ನು ಮಾಯೆಯಾಗಿಯೆ ಲೆಕ್ಕಿಸುತ್ತಿದ್ದೇವೆ. ಮಿತ್ರ, ಶತ್ರು ಗುಣಗಳಿಂದ ಒಳ್ಳೆಯದಾಗಿ, ಕೆಟ್ಟದಾಗಿ ಕಾಣಿಸುವುದು ಸಹ ಮಾಯೆಯೆಂದೇ ಹೇಳಬಹುದು. **ಒಬ್ಬ ಜೀವಿಯನ್ನು ಅವನ ಜೀವನದಲ್ಲಿ ಗುಣಗಳ ಮಾಯೆ ಕಷ್ಟಸುಖಗಳಲ್ಲಿ ಮುಳುಗಿಸಿ ದೇವರ ಮೇಲೆ ಜ್ಞಾಪಕವಿಲ್ಲದ ಹಾಗೆ ಮಾಡುತ್ತದೆ.** ಜೀವಿಯು ಗುಣಚಕ್ರದಲ್ಲಿನ ಯಾವುದೋ ಒಂದು ಗುಣಭಾಗದಲ್ಲಿ ವಾಸ ಮಾಡುತ್ತಾ ಅಲ್ಲಿನ ಗುಣಗಳಿಂದ ಬೆರೆತಿರುತ್ತಾನೆ. ಮೂರು ಗುಣಭಾಗಗಳಲ್ಲಿ ಒಂದು ಭಾಗದಲ್ಲಿ ವಾಸಿಸುವ ಜೀವಿಯು, ಉಳಿದ ಎರಡು ಗುಣಭಾಗಗಳೊಳಗೆ ಆಗಾಗ ಹೋಗಿ ಸ್ವಲ್ಪ ನಿಮಿಷಗಳಿದ್ದು ತಿರುಗಿ ಮೊದಲಿದ್ದ ಭಾಗದೊಳಗೆ ಬರುವನು. ಜೀವಿಯು ತನ್ನ ಮೇಲಿರುವ ಕರ್ಮ ಪ್ರಭಾವದಿಂದ ಕೆಲವು ನಿಮಿಷಗಳವರೆಗೆ ಪಕ್ಕದ ಭಾಗದೊಳಗೆ ಹೋದರೂ, ಆ ಭಾಗಗಳಲ್ಲಿಯೂ ಸಹ ಹನ್ನೆರಡು ಗುಣಗಳು ಇರುವುದರಿಂದ ಅಲ್ಲಿಯೂ ಸಹ ಆ ಗುಣಗಳ ಯೋಚನೆಗಳು, ಆಲೋಚನೆಗಳು ಬರುವುದು, ಆ ಗುಣಗಳಿಗೆ ಸಂಬಂಧಿಸಿದ ಕೆಲಸಗಳು ನಡೆಯುವುದು, ಅವುಗಳಿಗೆ ಸಂಬಂಧಿಸಿದ ಕರ್ಮಬರುವುದು ನಡೆಯುತ್ತದೆ. ಜೀವಿಯು ಯಾವ ಗುಣ ಭಾಗದಲ್ಲಿ ಹೆಚ್ಚಿನ ಕಾಲವಿರುವನೋ ಆ ಗುಣಭಾಗದ ಹೆಸರನ್ನು ಆ ಜೀವಿಗೆ ಸೇರಿಸಿ ಹೇಳಬಹುದು. ಜೀವಿಯು ಗುಣಚಕ್ರದಲ್ಲಿ ವಾಸವಿರುವ ಚಿತ್ರವನ್ನು ಮುಂದಿನ ಪುಟದಲ್ಲಿ ನೋಡಬಹುದು.




**ಗುಣಚಕ್ರ**

ಗುಣಚಕ್ರದಲ್ಲಿನ ಮೂರುಭಾಗಗಳಲ್ಲಿ ಒಂದೊಂದರಲ್ಲಿ 12 ಗುಣಗಳ ಪ್ರಕಾರ ಮೂರು ಭಾಗಗಳಲ್ಲಿ ಒಟ್ಟು 36 ಗುಣಗಳು ಇವೆ. ಈ ಮಾತು ನಿಜವೆಂದು ತಿಳಿಯುವುದಕ್ಕೆ ದೇವರು ನಮ್ಮಬಾಯಿಯಿಂದ ಒಂದು ಮಾತನ್ನು ಹೇಳಿಸುತ್ತಿರುವನು. ಯಾರನ್ನಾದರು ಉದ್ದೇಶಿಸಿ ಮಾತನಾಡುವಾಗ **"ಅವನಿಗೆ ಗಂಟೆಗೆ ಮೂವತ್ತಾರು ಗುಣಗಳು ಬದಲಾಗುತ್ತಿರುತ್ತವೆ"** ಎಂದು ಅನ್ನುತ್ತೇವೆ. ಒಂದು ಮಾತಿನ ಮೇಲೆ ನಿಲುಗಡೆ ಇಲ್ಲದ ಮನುಷ್ಯನನ್ನು ಕುರಿತು ಮಾತನಾಡುತ್ತಿರುವಾಗ ಈ ಮಾತು ಹೇಳುವುದು ನಡೆಯುತ್ತಿರುತ್ತದೆ. ಈ ಮಾತನ್ನು ಎನ್ನುವ ಮನುಷ್ಯನಿಗೆ ತಲೆಯೊಳಗೆ ಗುಣಚಕ್ರ, ಗುಣಗಳ ಭಾಗಗಳೂ, ಅದರಲ್ಲಿ ಜೀವಾತ್ಮನಿರುವುದು ತಿಳಿಯದಿದ್ದರೂ ಆತನು ಹಾಗೆ ಮಾತನಾಡು ವುದನ್ನು ನೋಡಿದರೆ ನಾವು ಹೇಳುತ್ತಿರುವ ಗುಣಗಳ ವಿಷಯ ಸತ್ಯವೆಂದು, ಒಳಗಿರುವ ಆತ್ಮವೇ ಆ ವಿಧವಾಗಿ ಸಾಕ್ಷಿಯಾಗಿ ಹೇಳಿಸುತ್ತಿದೆಯೆಂದು ತಿಳಿ ಯುತ್ತಿದೆ. ಗುಣಚಕ್ರ ಹೊರಗಿನಿಂದ ಮೊದಲ ಭಾಗದಲ್ಲಿರುವ ಜೀವಿಯನ್ನು ತಾಮಸನು ಎನ್ನುತ್ತೇವೆ. ಮೊದಲ ಗುಣಭಾಗದ ಹೆಸರು ತಾಮಸ ಗುಣಭಾಗ. ಆದ್ದರಿಂದ ಆ ಗುಣಭಾಗದ ಹೆಸರೇ ಆ ಜೀವಿಗೆ ಅನ್ವಯಿಸುತ್ತದೆ. ಹಾಗೆ ಎರಡನೆ ಭಾಗದಲ್ಲಿನ ಜೀವಿಯನ್ನು ರಾಜಸ ಎಂದು ಅನ್ನುತ್ತೇವೆ. ಮೂರನೆ ಭಾಗದಲ್ಲಿನ ಜೀವಿಯನ್ನು ಸಾತ್ವಿಕ ಎಂದು ಅನ್ನುತ್ತೇವೆ. ಇನ್ನು ನಾಲ್ಕನೆಯದು

ಮತ್ತು ಮಧ್ಯದಲ್ಲಿರುವುದು ಆತ್ಮಭಾಗ, ಆದ್ದರಿಂದ ಆ ಭಾಗದಲ್ಲಿರುವ ಜೀವಿಯನ್ನು ಯೋಗಿ ಎಂದು ಅನ್ನುತ್ತೇವೆ. ಆದರೆ ನಾಲ್ಕನೆ ಸ್ಥಾನಕ್ಕೆ ಜೀವಿಯು ಬರಬೇಕೆಂದರೆ ಆತನಿಗೆ ಎಷ್ಟೋ ಆತ್ಮಜ್ಞಾನ ತಿಳಿದಿರಬೇಕು. ಆತ್ಮಜ್ಞಾನ ತಿಳಿಯದೆ ಆತ್ಮ ಭಾಗದೊಳಗೆ ಯಾರೂ ಹೋಗಲಾರರು. ಮೂರು ಗುಣಗಳಲ್ಲಿ ಜೀವನಿರುವುದಕ್ಕೆ ಕಾರಣ ಕರ್ಮ ಪ್ರಭಾವವೆಂದು ಹೇಳಬಹುದು. ಕರ್ಮಕ್ಕೆ ಅತೀತವಾದುದು ಆತ್ಮ. ಆದ್ದರಿಂದ ಕರ್ಮಪ್ರಕಾರ ಮಧ್ಯ ಭಾಗಕ್ಕೆ ಹೋಗುವುದಕ್ಕೆ ಅವಕಾಶವಿಲ್ಲ. ಜೀವಿಯ ಶ್ರದ್ಧೆಯನ್ನನುಸರಿಸಿ ಆತ್ಮಜ್ಞಾನ ತಿಳಿದಾಗ ನಾಲ್ಕನೆ ಭಾಗಕ್ಕೆ ಹೋಗಬಹುದು, ಯೋಗಿ ಆಗಬಹುದು.

ಗುಣಚಕ್ರವನ್ನು ಮಾಯೆಚಕ್ರ ಎಂದು ಸಹ ಅನ್ನಬಹುದು. ಆ ಚಕ್ರದಲ್ಲಿ ಮೂರು ಭಾಗಗಳಲ್ಲಿರುವ ಮಾಯೆಯನ್ನು ಒಂದು ವಿಧವಾಗಿ, ನಾಲ್ಕನೆ ಭಾಗದಲ್ಲಿರುವ ಮಾಯೆಯನ್ನು ಮತ್ತೊಂದು ವಿಧವಾಗಿ, ಎರಡು ವಿಧಗಳಲ್ಲಿ ವಿಭಜಿಸಿ ಹೇಳಬಹುದು. ಮೂರು ಭಾಗಗಳಲ್ಲಿರುವ ಮಾಯೆ ಯಾರನ್ನಾದರು ದೇವರ ಮಾರ್ಗಕ್ಕೆ ಹೋಗದಂತೆ, ದೇವರ ನೆನಪು ಇಲ್ಲದ ಹಾಗೆ, ದೇವರ ಜ್ಞಾನವನ್ನು ತಿಳಿದುಕೊಳ್ಳದ ಹಾಗೆ ಮಾಡುತ್ತದೆ. ನಾಲ್ಕು ಭಾಗಗಳಲ್ಲಿ ಒಂದೇ ಮಾಯೆ ಆವರಿಸಿಕೊಂಡು ಇದ್ದರೂ, ಒಂದೇ ಮಾಯೆ ಎರಡು ವಿಧಗಳಲ್ಲಿ ಕೆಲಸ ಮಾಡುತ್ತದೆ. ಮೂರು ಗುಣಭಾಗದಲ್ಲಿರುವವನಿಗೆ ದೇವರ ಜ್ಞಾನವನ್ನು ತಿಳಿಯದ ಹಾಗೆಮಾಡಿ, ತನ್ನನ್ನು ದಾಟಿಹೋಗುವುದು ದುಸ್ಸಾಧ್ಯವೆಂದೆನಿಸುವುದು. ಅದೇ ಮಾಯೆ ನಾಲ್ಕನೆ ಭಾಗವಾದ ಗುಣಗಳಿಲ್ಲದ ಭಾಗದೊಳಗೆ ಸೇರಿದವನನ್ನು, ಅವನ ಯೋಗವನ್ನು ಕಾಪಾಡುವುದು. ಆ ಜೀವಾತ್ಮನನ್ನು ಯೋಗ ಮಾರ್ಗದಿಂದ ತಪ್ಪಿಹೋಗದ ಹಾಗೆ ಅವನ ಯೋಗದ ಕ್ಷೇಮವನ್ನು ಕಾಪಾಡುವುದು. ದೇವರಿಗೆ ಇಷ್ಟವಾದವನನ್ನು, ನಾಲ್ಕನೆ ಸ್ಥಾನದೊಳಗೆ ಹೋಗುವುದಕ್ಕೆ ಆತಂಕ ಇಲ್ಲದೆ ಮಾಡುವುದು ದೇವರಿಗೆ ಇಷ್ಟ ಇಲ್ಲದವನನ್ನು ತನ್ನ ಗುಣಗಳನ್ನು ದಾಟಲಾಗದ ಹಾಗೆ ಮಾಡಿ, ತನ್ನ ಮಾಯೆಯಲ್ಲಿಯೇ ಮುಳುಗಿಸುತ್ತದೆ. ದೇವರಿಗೆ ಯಾರು ಇಷ್ಟವಾದವರು ಎಂದು ಕೇಳಿದರೆ, ದೇವರ ಮೇಲೆ ಯಾರಿಗೆ ಇಷ್ಟವಿದೆಯೋ

ಅವರು ದೇವರಿಗೆ ಇಷ್ಟವಾದವರೆಂದು ಹೇಳಬಹುದು. ಅಷ್ಟೇ ಅಲ್ಲದೆ **ದೇವರಮೇಲೆ ಯಾರಿಗೆ ಎಷ್ಟು ಶಾತ ಇಷ್ಟ (ಶ್ರದ್ಧೆ) ಇರುವುದೋ, ದೇವರಿಗೂ ಸಹ ಅವನ ಮೇಲೆ ಅಷ್ಟೇ ಶಾತ ಇಷ್ಟ ಇರುತ್ತದೆ**. ಈ ವಿಷಯವನ್ನೇ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗ ಎಂಬ ಅಧ್ಯಾಯದಲ್ಲಿ 22ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ.

***ಶ್ಲೋ॥ ಅನನ್ಯಾಶ್ಚಿನ್ತಯನ್ತೋ ಮಾಂ ಯೇಜನಾಃ ಪರ್ಯುಪಾಸತೇ।***
***ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್॥***

**ಭಾವಾರ್ಥ** : ಅನ್ಯದೇವತೆಗಳ ನೆನಪು ಇಲ್ಲದೆ, ಇತರೆ ದೇವತೆಗಳನ್ನು ಆರಾಧಿಸದೆ ಯಾರಾದರೆ ನನ್ನನ್ನೇ ಆರಾಧಿಸುತ್ತಾರೋ, ಯಾರು ನಿತ್ಯವು ನನ್ನ ಆತ್ಮ ಭಾಗದಲ್ಲಿ ನನ್ನ ಆತ್ಮದೊಂದಿಗೆ ಬೆರೆತಿರುವರೋ, ಅಂತಹವರ ಯೋಗದ ಕ್ಷೇಮವನ್ನು ಮಾತ್ರವೆ ನಾನೇ ವಹಿಸುತ್ತಿದ್ದೇನೆಂದು ಹೇಳಿದ್ದಾನೆ. ನಾನೇ ಅವನ ಯೋಗಕ್ಕೆ ಎಂತಹ ಅನಾರೋಗ್ಯ, ಆತಂಕಗಳು ಬಾರದ ಹಾಗೆ ನೋಡುತ್ತೇನೆ ಎಂದು ಅಂದಾಗ ಆತನು ಪ್ರತ್ಯಕ್ಷವಾಗಿ ಏನೂ ಮಾಡುವುದಿಲ್ಲ. ಆತನು ಏನು ಮಾಡದವನು. ಕೆಲಸವಿಲ್ಲದ ಕ್ರಿಯಾರಹಿತನು. ಆತನು ಮಾಡುತ್ತೇನೆಂದು ಹೇಳಿದ ಕೆಲಸವನ್ನೆಲ್ಲ ಮಾಡುವುದು ಪ್ರಕೃತಿಯೇ. ಒಬ್ಬ ಭಕ್ತನ ಯೋಗವನ್ನು ಭಂಗ ಮಾಡದೆ ನೋಡುವುದು ಪ್ರಕೃತಿಯೆಂದೇ ತಿಳಿಯಬೇಕು. ಶರೀರದಲ್ಲಿ ಆತ್ಮ ದೊಂದಿಗೆ ನಿತ್ಯವು ಬೆರೆತವನನ್ನು, ನಾಲ್ಕನೆ ಗುಣರಹಿತ ಭಾಗದೊಳಗೆ ಹೋದವನನ್ನು, ಅಲ್ಲಿಯೇ ಅದೇ ಚಕ್ರದಲ್ಲಿ ಸ್ಥಾನ ಮಾಡಿಕೊಂಡ ಮಾಯೆ ಆತನ ಯೋಗಕ್ಕೆ ಆತಂಕ ಇಲ್ಲದಂತೆ ಮಾಡುವುದು. ಯೋಗ ಭಂಗವಾಗದಂತೆ ಮಾಡುವುದು, ಯೋಗಕ್ಕೆ ಆತಂಕ ಮಾಡುವುದು, ಯೋಗಕ್ಕೆ ಭಂಗ ಮಾಡುವುದು ಮಾಯೆಯೇ. ಅದೇ ಮಾಯೆ ದೇವರಿಗೆ ಇಷ್ಟವಾದವನನ್ನು ಯಾವ ಆತಂಕ ಮಾಡುವುದಿಲ್ಲ. ತನ್ನ ಪತಿಗೆ ಯಾರು ಇಷ್ಟವಾದವರೊ ತನಗೂ (ಮಾಯೆಗೂ) ಸಹ ಅವರು ಇಷ್ಟವಾದವರೆಂದೇ ತಿಳಿಯುತ್ತದೆ. ಈ ವಿಷಯವನ್ನೇ ವೇಮನ ಯೋಗಿ ತನ್ನ ಪದ್ಯದಲ್ಲಿ ವ್ಯಕ್ತಪಡಿಸಿದ್ದಾನೆ. ಪದ್ಯವನ್ನು ಕೆಳಗೆ ನೋಡಿರಿ. ಈ

ಪದ್ಯ ನಮ್ಮ ರಚನೆಗಳಲ್ಲಿ **"ನಿಗೂಢ ತತ್ತ್ವಾರ್ಥಬೋಧನೆ"** ಎಂಬ ಚಿಕ್ಕ ಗ್ರಂಥದೊಳಗಿರುವುದು.

ಪತಿಯೊಪ್ಪಿದರೆ ಸತಿಯೊಪ್ಪುವಳು
ಪತಿ ಸತಿಗಳೊಂದಾದರೆ ಪರಮ ಪಾವನವಾಗುತ್ತದೆ
ಪತಿ ಸತಿ ನ್ಯಾಯವೇ ಮೋಕ್ಷ
ಬತುಲಿತ ಪರಮಾತ್ಮನಲೈಕ್ಯವಾಗೊ ವೇಮಾ.

**ಭಾವಾರ್ಥ :** ಪತಿ ಎಂದರೆ ಗಂಡ, ಸತಿ ಎಂದರೆ ಹೆಂಡತಿ ಎಂದು ಎಲ್ಲರಿಗೂ ತಿಳಿದಿದೆ. ಮದುವೆ ಆದರೇನೆ ಪತಿ, ಸತಿಗಳಾಗುತ್ತಾರೆನ್ನುವ ವಿಷಯವು ಸಹ ತಿಳಿದಿದೆ. ಪತಿ, ಸತಿಗಳಿಗೆ ಮಕ್ಕಳು ಹುಟ್ಟುತ್ತಾರೆಂದೂ ಸಹ ತಿಳಿದಿದೆ. ಈ ವಿಧಾನವೆಲ್ಲ ಜ್ಞಾನಿಗಳಿಗು, ಅಜ್ಞಾನಿಗಳಿಗು ಎಲ್ಲರಿಗೂ ತಿಳಿದಿರುವುದಾಗಿಯೂ ಬಹಳ ಜನರಿಗೆ ಈ ವಿಷಯ ದೈವಿಕವಾದದೆಂದು, ಆ ದೈವಿಕ ವಿಷಯವೇ ಪ್ರಪಂಚದಲ್ಲಿ ಹೀಗೆ ಪ್ರತಿಬಿಂಬಿಸಿದೆಯೆಂದು, ಪ್ರಪಂಚದಲ್ಲಿ ಪ್ರತ್ಯಕ್ಷವಾಗಿರುವ ಪತಿ, ಸತಿಗಳ ವಿಧಾನವನ್ನು ಆಧಾರ ಮಾಡಿಕೊಂಡು ಪರೋಕ್ಷವಾಗಿರುವ ದೈವ ವಿಧಾನವನ್ನು ಅರ್ಥಮಾಡಿಕೊಳ್ಳಬಹುದೆಂದು ದೇವರೇ ಹೀಗೆ ಇಟ್ಟಿದ್ದಾನೆ. ದೈವಿಕವಾದ ಪತಿ, ಸತಿ ವಿಧಾನವೇನೋ ಈಗ ವಿವರಿಸಿ ನೋಡಿಕೊಳ್ಳೋಣ.

ಭಗವದ್ಗೀತೆ ಗುಣತ್ರಯ ವಿಭಾಗಯೋಗ ಎಂಬ ಅಧ್ಯಾಯದಲ್ಲಿ ಮೊದಲೆ ಪರಮಾತ್ಮನನ್ನು ಪತಿಯೆಂದು, ಪ್ರಕೃತಿಯನ್ನು ಸತಿಯೆಂದು ಹೇಳಿದ್ದಾರೆ. ಶ್ರೀಕೃಷ್ಣನು ಹೇಳಿದ ಭಗವದ್ಗೀತೆ ಪ್ರಕಾರ ಜಗತ್ತು ಎಲ್ಲದಕ್ಕು ಪ್ರಕೃತಿ, ಪುರುಷರು ಸತಿ ಪತಿಗಳಾಗಿ ಇದ್ದು ಪ್ರತಿ ಜೀವರಾಶಿಗೆ ಅವರೇ ತಾಯಿ ತಂದೆಗಳಾಗಿದ್ದಾರೆ. ಪ್ರಪಂಚದಲ್ಲಿನ ಮನುಷ್ಯ ಜಾತಿಗೆ ಅಲ್ಲದೆ ಕ್ರಿಮಿ, ಕೀಟ, ಪಶು, ಪಕ್ಷಿ, ವೃಕ್ಷಾದಿ ಗಳೆಲ್ಲವುಗಳಿಗು ತಾಯಿ ಪ್ರಕೃತಿ, ತಂದೆ ಪರಮಾತ್ಮ ಎಂದು ತಿಳಿದುಬಂದಿದೆ. ಜಗತ್ತಿನ ಎಲ್ಲಕ್ಕು ತಾಯಿ ತಂದೆಯರಾಗಿದ್ದು ಪತಿ, ಸತಿಗಳಾಗಿ ಒಪ್ಪುವಂತೆ ಪರಮಾತ್ಮ, ಪ್ರಕೃತಿ ಪ್ರಪಂಚದಲ್ಲಿ ವಿಭಿನ್ನವಾಗಿ ಪ್ರವರ್ತಿಸುತ್ತಿದ್ದಾರೆ. ಪತಿಯಾದ

ಪರಮಾತ್ಮನಿಗೆ, ಸತಿಯಾದ ಪ್ರಕೃತಿ ವಿಧೇಯಳಾಗಿದ್ದು, ಪರಮಾತ್ಮ ಆದೇಶಾನುಸಾರ ಜಗತ್ತಿನ ಪರವಾಗಿ ಪರಮಾತ್ಮ ಮಾರ್ಗವಾದ ದೈವಮಾರ್ಗಕ್ಕೆ ಪ್ರಕೃತಿಯಾದ ಮಾಯೆ ಎಷ್ಟೋ ವಿರುದ್ಧವಾಗಿದೆ. ದೈವಮಾರ್ಗವನ್ನು ಅನುಸರಿಸಬೇಕೆಂದುಕೊಳ್ಳುವವನ ಆ ಪ್ರಯತ್ನವನ್ನು ಭಂಗವಾಗುವಂತೆ ಮಾಡುತ್ತದೆ. ಎಲ್ಲವು ದೇವರಿಗೆ ತಿಳಿದೆ ನಡೆಯುತ್ತಿದೆ. ದೇವರನ್ನು ಸೇರುವ ಪ್ರಯತ್ನದಲ್ಲಿ ಮಾಯೆಯ ಪ್ರಭಾವಕ್ಕೆ ಸಹಿಸಿಕೊಳ್ಳದೆ ಎಲ್ಲರೂ ಹಿಂತಿರುಗುತ್ತಿದ್ದಾರೆ. ಆದರೂ ಎಷ್ಟೋ ಲಕ್ಷಗಳ ಜನರಲ್ಲಿ ಯಾರೋ ಒಬ್ಬರು ಮಾಯೆಯನ್ನು ವಿರೋಧಿಸಿ ಎಲ್ಲ ಕಷ್ಟಗಳನ್ನು ಸಹಿಸಿಕೊಂಡು ದೇವರನ್ನು ಸೇರಿಕೊಳ್ಳಬೇಕೆಂದು ಪ್ರಯತ್ನಿಸುತ್ತಿರುತ್ತಾನೆ. ಅಂತಹವರನ್ನು ದೇವರು, ಅವರ ಮಾರ್ಗವನ್ನು ಸುಗಮಮಾಡಿ, ಮಾಯೆ ಆತಂಕವನ್ನು ತೊಲಗಿಸಿ, ತನ್ನಲ್ಲಿಯೇ ಸೇರಿಸಿ ಕೊಳ್ಳುವನು. ಬಲವಾದ ಮಾಯೆ ಕಲ್ಪಿಸುವ ಪರಿಸ್ಥಿತಿಗಳೆಲ್ಲವನ್ನು ಅನುಭವಿಸುತ್ತ, ಛಲ ಬಿಡದೆ ದೇವರಿಗಾಗಿ ಪ್ರಯತ್ನಿಸುವವನನ್ನು ದೇವರು ಒಪ್ಪಿಕೊಳ್ಳುವನು. ದೇವರು ಒಪ್ಪಿಕೊಂಡಾಗ ಮಾಯೆ ಅವನನ್ನು ಆತಂಕಪಡಿಸುವುದಿಲ್ಲ, ಅಂತಹವನ ಯೋಗದ ಕ್ಷೇಮವನ್ನು ದೇವರೇ ಪರಿರಕ್ಷಿಸುವನು. ಆಗ ಅವನು ದೇವರಲ್ಲಿ ಐಕ್ಯವಾಗಿ ಹೋಗುವನು.

ಪ್ರಪಂಚದಲ್ಲಿ ಮಾಯೆ ಉಂಟುಮಾಡುವ ಅನೇಕ ಕಷ್ಟಗಳನ್ನು ಅತಿಕ್ರಮಿಸಿ, ದೇವರ ಮಾರ್ಗವನ್ನು ಬಿಡದವನನ್ನು, ದೇವರು ತನ್ನ ಮನುಷ್ಯನಂತೆ ಅಂಗೀಕರಿಸುವನು. ಆಗ ಹಿಂದೆಯೇ ಪ್ರಕೃತಿಯಾದ ಮಾಯೆ ತಾನು ಅವನನ್ನು ಒಪ್ಪಿಕೊಂಡು ಅವನಿಗೆ ಆತಂಕ ಏರ್ಪಡಿಸುವುದಿಲ್ಲ. ಆದ್ದರಿಂದ ಮೇಲಿನ ಪದ್ಯದಲ್ಲಿ ಪತಿಯೊಪ್ಪಿದರೆ ಸತಿಯೊಪ್ಪುವಳು ಎಂದಿದ್ದಾರೆ. ಆ ವಿಧವಾಗಿ ಪರಮಾತ್ಮ, ಪ್ರಕೃತಿ ಇಬ್ಬರು ಅವನ ಬಗ್ಗೆ ಒಂದಾಗಿ ನಡೆದುಕೊಂಡಾಗ ಅವನು ಮೋಕ್ಷವನ್ನು ಹೊಂದುವನು. ಅದನ್ನೇ ಪದ್ಯದಲ್ಲಿ ವ್ಯಕ್ತಪಡಿಸುತ್ತಾ ಪತಿಸತಿಗಳೊಂದಾದರೆ ಪರಮ ಪಾವನದಲ್ಲಿ ಅಂದಿದ್ದಾರೆ. ಪತಿ ಸತಿ ಇಬ್ಬರೂ ಒಂದೇ ಮಾರ್ಗದಲ್ಲಿ ನಡೆದುಕೊಳ್ಳುವುದು ನ್ಯಾಯವಾಗುತ್ತದೆ. ಪತಿಗೆ ಸತಿ

ವಿರುದ್ಧವಾಗಿ ನಡೆದುಕೊಳ್ಳುವುದು ಅನ್ಯಾಯವಾಗುತ್ತದೆ. ಪ್ರಕೃತಿ, ಪರಮಾತ್ಮ ಭಕ್ತನ ಬಗ್ಗೆ ನ್ಯಾಯ ಮಾರ್ಗದಲ್ಲಿ ನಡೆದರೆ ಭಕ್ತನಿಗೆ ಮೋಕ್ಷ ಲಭಿಸುತ್ತದೆ. ಆದ್ದರಿಂದ ಮೇಲಿನ ಪದ್ಯದಲ್ಲಿ ಪತಿ ಸತಿ ನ್ಯಾಯವೆ ಮೋಕ್ಷ ಎಂದಿದ್ದಾರೆ. ಪತಿ ಸತಿ ನ್ಯಾಯವಾಗಿ ನಡೆದಾಗ ಭಕ್ತನು ತಕ್ಷಣವೆ ಜನ್ಮರಾಹಿತ್ಯವನ್ನು ಹೊಂದುವನು. ಆದುದರಿಂದ ಬತುಲಿತ ಪರಮತ್ಮನೈಕ್ಯವಾಗುವನು ಎಂದಿದ್ದಾರೆ.

ಪ್ರಪಂಚದಲ್ಲಿ ಒಬ್ಬ ಭಕ್ತನ ಬಗ್ಗೆ ಪತಿಸತಿಯರಾದ ಪ್ರಕೃತಿ ಪರಮಾತ್ಮರು ಮೊದಲು ಅನ್ಯಾಯವಾಗಿ ಪ್ರವರ್ತಿಸುತ್ತಾರೆಂದು ಈ ಪದ್ಯದಿಂದ ವೇಮನ ನಮಗೆ ತಿಳಿಸಿದ್ದಾನೆ. ಪತಿ ಒಪ್ಪಿದಾಗಲೇ ಸತಿಯು ಒಪ್ಪಿಕೊಂಡು ಇಬ್ಬರು ನ್ಯಾಯವಾಗಿ ಪ್ರವರ್ತಿಸುವರು. ಅವರಿಬ್ಬರು ಒಂದಾಗಿ ನ್ಯಾಯವಾಗಿ ಪ್ರವರ್ತಿಸಿದಾಗಲೇ ಭಕ್ತನಿಗೆ ಮೋಕ್ಷ ಲಭಿಸುವುದು. ಮಾಯೆ ಆತಂಕಗಳನ್ನು ಸಹಿಸಿಕೊಳ್ಳದೆ ನಾನೆಷ್ಟು ಭಕ್ತಿಯಿಂದ ಇದ್ದರೂ ನನಗೆ ಕಷ್ಟಗಳು ಬರುತ್ತಿವೆಯೆಂದು, ದೇವರಕಡೆ ನ್ಯಾಯವೇ ಇಲ್ಲವೆಂದುಕೊಂಡವನು ದೇವರ ಮಾರ್ಗದಲ್ಲಿ ಭ್ರಷ್ಟನಾಗುವನು. ದೇವರನ್ನು ಕುರಿತು ಏನು ಅಂದುಕೊಳ್ಳದೆ ಎಲ್ಲದಕ್ಕು ಸಹಿಸಿಕೊಂಡವನು ಮೊದಲು ಪರಮಾತ್ಮನಿಂದ ಒಪ್ಪಿಗೆ ಪಡೆದು ಪ್ರಕೃತಿ, ಪರಮಾತ್ಮರು ನ್ಯಾಯವಾಗಿ ಪ್ರವರ್ತಿಸಿದಾಗ ಭಕ್ತನು ಮೋಕ್ಷವನ್ನು ಹೊಂದುವನು.

ಪತಿ ಸತಿಗಳ ವಿಧಾನವು ಪ್ರಪಂಚದಲ್ಲಿ ಪ್ರತಿಬಿಂಬಿಸಿ ಇದೆಯೆಂದು ಮೊದಲೆ ಹೇಳಿಕೊಂಡಿದ್ದೇವೆ. ಪತಿಗೆ ಸತಿ ವಿರುದ್ಧವಾಗಿ ನಡೆದುಕೊಳ್ಳುವುದು ಪತಿಯನ್ನು ತನ್ನ ಮಾತು ಕೇಳುವಹಾಗೆ ಮಾಡಿಕೊಳ್ಳುವ ಅನ್ಯಾಯ ವಿಧಾನವು ಭೂಮಿಮೇಲೆ ಇದೆ. ಹಾಗೆಯೇ ಪತಿಗೆ, ಸತಿ ಅನುಕೂಲವಾಗಿ ನಡೆದುಕೊಳ್ಳುವುದು, ಪತಿ ಮಾತನ್ನು ತನ್ನ ಮಾತೆಂದು ಪತಿ ಹೇಳಿದಹಾಗೆ ಸತಿ ನಡೆದುಕೊಳ್ಳುವ ನ್ಯಾಯ ಮಾರ್ಗವು ಭೂಮಿ ಮೇಲೆ ಇದೆ. ನಿಮ್ಮ ಅನುಭವದಲ್ಲಿ ನ್ಯಾಯ ಅನ್ಯಾಯ, ಪತಿ ಸತಿಗಳನ್ನು ಕುರಿತು ತಿಳಿದಂತಾದರೆ ಯಾರಾದರೂ ಸಂಪೂರ್ಣ ಜ್ಞಾನಿಗಳಾಗಬಹುದು. ದೇವರ ಮಾರ್ಗದಲ್ಲಿ ನಡೆಯುವವರಿಗೆ ಆತಂಕಗಳು ಏರ್ಪಟ್ಟರೂ, ದೇವರ ಹತ್ತಿರ ನ್ಯಾಯವಿದೆಯಾ? ಎಂದು ಸಹನೆಯನ್ನು

ಕಳೆದುಕೊಂಡು ಮಾತನಾಡುವುದಿಲ್ಲ. ಎಷ್ಟು ಕಷ್ಟಗಳು ಬಂದರು ಇದು ತಾಯಿಯಾದ ಮಾಯೆ ಕೆಲಸವೆಂದು ಜ್ಞಾಪಕಹೊಂದಿ ನಡೆದುಕೊಳ್ಳುವರು.

ದೇವರು ಪ್ರಪಂಚವನ್ನು ಸೃಷ್ಠಿಸುವಮುನ್ನ ಕೆಲಸಮಾಡಿ, ಎಲ್ಲವನ್ನು ಸೃಷ್ಠಿಸಿದ್ದಾನೆ. ನಂತರ ಆತನು ಕ್ರಿಯಾರಹಿತನಾಗಿದ್ದಾನೆ. ಸೃಷ್ಠಿಸಿ ಪಾಲಿಸಿ ಅಂತ್ಯ ಮಾಡುವವನು ದೇವರೇ ಆದರೂ, ಆತನು ಮೂಲಕರ್ತ ಮಾತ್ರವೆ. ಆತನ ಕೆಲಸವನ್ನೆಲ್ಲ ಮಾಡುವುದು ಪ್ರಕೃತಿ ಒಂದೇ ಎಂದು ತಿಳಿಯಬೇಕು. ದೇವರು ಕಾಣಿಸುವುದಿಲ್ಲ, ಆತನು ಎಂತಹವನೆಂದು ಯಾರಿಗೂ ತಿಳಿದಿಲ್ಲ. ಆದರೆ ಆತನ ಕಾರ್ಯಗಳೆಲ್ಲವನ್ನು ನೆರವೇರಿಸುವ ಪ್ರಕೃತಿ ಎಲ್ಲರಿಗೂ ಕಾಣಿಸುತ್ತದೆ, ಕೇಳಿಸುತ್ತದೆ, ಎಲ್ಲ ವಿಧಗಳಲ್ಲಿ ತಿಳಿಯುತ್ತಿದೆ. ಆದರೂ ಪ್ರಕೃತಿಯನ್ನು ಸ್ವಲ್ಪಮಟ್ಟಿಗೆ ಲೆಕ್ಕಿಸಬಹುದು. ಅಷ್ಟೇ ಆಗಲಿ ಪ್ರಕೃತಿಯನ್ನು ಸಹ ಪೂರ್ತಿ ತಿಳಿಯಲಾರೆವು. ಆಕಾಶದ ಮಿತಿಯೇ ತಿಳಿದಿಲ್ಲ. ಹತ್ತಿರವಿರುವ ಮೇಘದ ವಿಷಯವೇ ಪೂರ್ತಿ ಯಾರಿಗೂ ತಿಳಿದಿಲ್ಲ. ಹೊಗೆ ರೂಪದಲ್ಲಿರುವ ಮೇಘವು ಘನರೂಪದಲ್ಲಿರುವ ಎಷ್ಟೋ ಜೀವರಾಶಿಗಳನ್ನು, ಎಷ್ಟೋ ವಸ್ತುಗಳನ್ನು, ಎಷ್ಟೋ ನೀರನ್ನು ಎಷ್ಟೋ ಜಲಚರಗಳನ್ನು ಕಾಣಿಸದೆ ಬಚ್ಚಿಟ್ಟುಕೊಂಡಿದೆ ಎನ್ನುವ ವಿಷಯವು ಯಾರಿಗೂ ತಿಳಿಯದು. ಚಿಕ್ಕ ಮೇಘದ ಒಂದು ವಿಷಯವೇ ನಮಗೆ ತಿಳಿಯದೆ ಇರುವಾಗ ಅಷ್ಟು ದೊಡ್ಡ ಪ್ರಕೃತಿ ವಿಷಯವು ಎಂದಿಗೂ ತಿಳಿಯಲಾರೆವು. ಪ್ರಕೃತಿಗಿಂತ ದೊಡ್ಡವನಾದವನು, ಪ್ರಕೃತಿಗೆ ಪತಿ ಸ್ಥಾನದಲ್ಲಿರುವವನಾದ ದೇವರು ನಮಗೆ ತಿಳಿದಿದೆ ಎಂದರೂ, ದೇವರನ್ನು ನಾವು ನೋಡಿದ್ದೇವೆ ಎಂದರೂ, ನಾವು ದೇವರಾಗಿಹೋಗಿದ್ದೇವೆ ಎಂದರೂ ಆ ಮಾತುಗಳೆಲ್ಲವನ್ನು ಕೇಳಿ ನಗಬೇಕಾಗಿರುವುದೇ ಹೊರತು ಏನು ಮಾಡಲಾರೆವು. ಹಾಗೆ ಅಂದವರನ್ನು ನೋಡಿ ಪ್ರಕೃತಿ ಸಹ ನಗುತ್ತಿರುತ್ತದೆಂದು ಹೇಳಬಹುದು. ಪ್ರಕೃತಿಯೇ ಗುಣರೂಪದಲ್ಲಿನ ಮಾಯೆ ಎಂಬ ಹೆಸರಿನಿಂದ ಮನುಷ್ಯನ ಶರೀರದಲ್ಲಿ ಇದೆ.

ಸ್ಥೂಲವಾಗಿ ಹೊರಗೆ ಕಾಣಿಸುವ ಪ್ರಕೃತಿ, ಸೂಕ್ಷ್ಮವಾಗಿ ಕಾಣಿಸದೆ ಮಾಯೆಯಾಗಿ ಶರೀರದಲ್ಲಿ ಇದ್ದೂ, ನನ್ನನ್ನೇ ತಿಳಿಯದವನು ನನ್ನ ಪತಿಯನ್ನು

ತಿಳಿಯಬಲ್ಲೆಯಾ? ನನ್ನನ್ನು ದಾಟಿಹೋಗುವುದೆ ಯಾರಿಗೂ ಸಾಧ್ಯವಿಲ್ಲ, ಹಾಗಿರುವಾಗ ದೇವರನ್ನು ನೋಡಿದ್ದೇನೆ ಎನ್ನುತ್ತೀಯ? ಎಂದು ಅವನಿಗೆ ದೇವರ ನೆನಪು, ದೇವರ ಜ್ಞಾನ ತಿಳಿಯದಂತೆ ಮಾಡುವುದು. ಅವನ ತಲೆಯಲ್ಲಿ ಅವನಿಗೆ ನನಗೆ ದೇವರು ತಿಳಿದಿದೆ ಎನ್ನುವ ಜ್ಞಾಪಕವನ್ನುಳಿಸಿ ನನಗೆ ಜ್ಞಾನದಿಂದ ಕೆಲಸವಿಲ್ಲವೆಂದು ಅಂದುಕೊಳ್ಳುವಂತೆ ಮಾಡುವುದು. ಶರೀರದ ಹೊರಗೆ ಪ್ರಕೃತಿ ರೂಪದಲ್ಲಿ, ಶರೀರದ ಒಳಗೆ ಗುಣರೂಪದಲ್ಲಿ ಮಾಯೆ ಇದೆ. ಈ ಸೃಷ್ಠಿಯನ್ನು ಸೃಷ್ಠಿಸುವುದು ಸೃಷ್ಠಿಕರ್ತ ದೇವರೇ ಆಗಿರುವಾಗ ಸೃಷ್ಠಿಸಲ್ಪಟ್ಟಿರುವದೆಲ್ಲವನ್ನು ನಡೆಸುತ್ತಾ ಪಾಲಿಸುವುದು ಪ್ರಕೃತಿ (ಮಾಯೆ). ದೇವರು ಎಂದಿಗೂ ಇರುವವನೇ, ಆದರೆ ಪ್ರಕೃತಿ ಮಾತ್ರ ದೇವರ ಹಗಲು ಮಾತ್ರವಿದ್ದೂ, ದೇವರ ರಾತ್ರಿಯಲ್ಲಿ ಮಾತ್ರ ಅದೃಶ್ಯವಾಗಿ ದೇವರಲ್ಲಿಯೇ ಬೆರೆತು ಹೋಗುವುದು. ಪ್ರಕೃತಿ ಇದ್ದರೆ ಜೀವರಾಶಿಗಳು ಅವುಗಳ ಜೀವನ ಇರುತ್ತದೆ. ಜೀವರಾಶಿಗಳೆಲ್ಲವನ್ನು ಪ್ರಕೃತಿಯೇ ಪಾಲಿಸಿ, ಪೋಷಿಸಿ, ನಡೆಸುತ್ತಿರುವಾಗ, ಪ್ರಕೃತಿ ಇಲ್ಲದ ಸಮಯದಲ್ಲಿ ಜೀವರಾಶಿಗಳೆಲ್ಲ ನಶಿಸಿ ಪ್ರಕೃತಿಯಲ್ಲಿಯೇ ಸೇರಿ ಹೋಗುತ್ತಿವೆ. ಸೃಷ್ಟ್ಯಾದಿಯಲ್ಲಿ ದೇವರು ಮೊದಲು ಪ್ರಕೃತಿಯನ್ನು ಮಾತ್ರ ಸೃಷ್ಠಿಸಿದ್ದಾನೆ. ನಂತರ ಪ್ರಕೃತಿಯೇ ಎಲ್ಲ ಕೆಲಸಗಳು ಮಾಡಿ ಜೀವರಾಶಿಗಳೆಲ್ಲವನ್ನು ಹುಟ್ಟಿಸಿದೆ. ಆದ್ದರಿಂದ ಭಗವದ್ಗೀತೆಯಲ್ಲಿ ಭಗವಂತನು ಸರ್ವಜೀವರಾಶಿಗಳಿಗೆ ತಂದೆ ಪರಮಾತ್ಮ, ತಾಯಿ ಪ್ರಕೃತಿಯೆಂದು ಹೇಳಿದ್ದಾನೆ. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು, ಅದೇನೆಂದರೆ! ದೇವರೇ ಅಲ್ಲವೇ ಎಲ್ಲರನ್ನು ಹುಟ್ಟಿಸಿರುವುದು, ಆತನೇ ತಾನೆ ಸಮಸ್ತವೆಲ್ಲದಕ್ಕು ಸೃಷ್ಠಿಕರ್ತ, ಆಗಿರುವಾಗ ದೇವರು ಪ್ರಕೃತಿಯನ್ನು ಮಾತ್ರ ಸೃಷ್ಠಿಸಿರುವಾಗ, ನಂತರ ಪ್ರಕೃತಿಯೇ ಸಕಲ ಪ್ರಾಣಿಗಳನ್ನು ಸೃಷ್ಠಿಸಿದೆ ಯೆಂದು, ದೇವರು ಯಾರನ್ನು ಸೃಷ್ಠಿಸಲಿಲ್ಲವೆಂದು ನೀವು ಹೇಳುವುದು ತಪ್ಪಲ್ಲವೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗಿದೆ.

ಹೊರಗಿನ ಪ್ರಪಂಚದಲ್ಲಿ ಸತಿಪತಿಯರನ್ನು ಗಮನಿಸಿ ನೋಡೋಣ. ಪತಿ ಸತಿಯಿಂದ ಸಂಗಮಿಸಿದರೆ ಸತಿ ಗರ್ಭಧರಿಸಿ ಮಕ್ಕಳನ್ನು ಹೆರುತ್ತಾಳೆ.

ಪುರುಷನು ಸ್ತ್ರೀಯೊಂದಿಗೆ ಬೆರೆಯವುದು ತಿಳಿದಿಲ್ಲ ಆದರೆ, ಸ್ತ್ರೀ ಗರ್ಭ ಧರಿಸಿ ಸ್ವಲ್ಪ ಕಾಲಕ್ಕೆ ಪ್ರಸವಿಸುವುದು ಎಲ್ಲರೂ ಪ್ರತ್ಯಕ್ಷವಾಗಿ ನೋಡುತ್ತಿರುವ ವಿಷಯವೇ. ಹುಟ್ಟಿದ ಮಗುವಿಗೆ ತಂದೆ, ತಾಯಿಯ ಪತಿಯೇ ಆದರೂ, ಗರ್ಭವನ್ನು ಧರಿಸಿ ಸ್ವಲ್ಪಕಾಲಕ್ಕೆ ತಾಯಿಯೇ ಮಗುವನ್ನು ಹೆರುತ್ತಾಳೆ. ಇದೇ ವಿಧವಾಗಿ ಪತಿಯಾಗಿರುವ ಪರಮಾತ್ಮ ಕರ್ತನಾದರೂ, ಸೃಷ್ಠಿ ಕಾರ್ಯವನ್ನು ತಾಯಿ ಯಾಗಿರುವ ಪ್ರಕೃತಿ ಮಾಡಿದೆ. ಹುಟ್ಟಿದ ಮಗುವಿಗೆ ಪ್ರಕೃತಿಯಾದ ತಾಯಿಯೇ ಪೋಷಣೆ ಕೊಡುತ್ತಿದ್ದಾಳೆ. ಶರೀರವನ್ನು ಗರ್ಭದಲ್ಲಿ ತಯಾರುಮಾಡಿ ಹೆತ್ತವಳು ತಾಯಿಯೇ ಎಂದು, ತಂದೆ ಕರ್ತ ಮಾತ್ರವೆಂದೇ ತಿಳಿಯಬೇಕು. ಇದೇ ವಿಧಾನವು ಪ್ರಕೃತಿ ಪರಮಾತ್ಮ ವಿಧಾನದಲ್ಲಿ ಸಹ ನಡೆಯುತ್ತದೆ. ಸರ್ವ ಜೀವರಾಶಿಗಳು ಪ್ರಕೃತಿ (ತಾಯಿ) ಯಿಂದಲೆ ಹುಟ್ಟುತ್ತಿವೆ. ತಾಯಿಯನ್ನೇ (ಪ್ರಕೃತಿಯನ್ನೇ) ಮೊದಲು ನೋಡುತ್ತಿವೆ. ಆದ್ದರಿಂದ ಮೊದಲು ತಾಯಿ ಮಾತ್ರ ತಿಳಿಯುವುದು. ತಂದೆಯಾದ ದೇವರು ತಿಳಿಯದವನು. ಸರ್ವಜೀವರಾಶಿಗಳಿಗು ಭೌತಿಕ ತಾಯಿಯೆ ಮೊದಲು ತಿಳಿಯುವುದು. ನಂತರ ತಂದೆ ತಿಳಿಯುವನು. ಒಂದು ಮಗು ತಾಯಿ ಗರ್ಭದಲ್ಲಿ ಬೆಳೆಯುತ್ತಿರುವಾಗ, ತಾಯಿ ಶರೀರದಲ್ಲಿನ ರಕ್ತಮಾಂಸಗಳನ್ನು ಹಂಚಿಕೊಂಡು ತಯಾರಾದ ಶರೀರದಿಂದ ಹುಟ್ಟುತ್ತಿದೆ. ಹಾಗೆ ಪ್ರಕೃತಿ ಗರ್ಭದಲ್ಲಿ ಹುಟ್ಟಿದ ಪ್ರತಿ ಜೀವರಾಶಿ, ಪ್ರಕೃತಿಯ ಐದು ಭಾಗಗಳನ್ನು ಹಂಚಿಕೊಂಡು, ಪ್ರಕೃತಿ ಭಾಗಗಳಿಂದ ತಯಾರಾದ ಶರೀರದಿಂದ ಹುಟ್ಟುತ್ತಿದೆ. ಹುಟ್ಟಿದ ಪ್ರತಿ ಮಗುವಿಗು ಮೊದಲು ತಾಯಿಯೇ ತಿಳಿಯುತ್ತಾಳೆ. ತಂದೆ ತಿಳಿಯುವುದಿಲ್ಲ. ಹಾಗೆ ಸೃಷ್ಠಿಯಲ್ಲಿ ತಯಾರಾದ ಪ್ರತಿ ಜೀವರಾಶಿಗೂ ಮೊದಲು ಪ್ರಕೃತಿಯೇ ಕಾಣಿಸುತ್ತಿದೆ, ಪರಮಾತ್ಮ ಕಾಣಿಸುವುದಿಲ್ಲ. ಜೀವರಾಶಿಗಳಿಗೆ ಮೊದಲು ತಿಳಿಯುವುದು ಸ್ತ್ರೀತತ್ವವೇ, ನಂತರ ಪುರುಷತತ್ವ ತಿಳಿಯುತ್ತದೆ. ಅಷ್ಟೇ ಅಲ್ಲದೇ ಸ್ತ್ರೀತತ್ವದಿಂದಲೇ ಹುಟ್ಟುತ್ತಿದ್ದಾರೆ. ನಂತರ ಕಾರಣವಾದ ಪುರುಷತ್ವ ಗೋಚರಿ ಸುತ್ತದೆ. ಈ ಸತ್ಯವನ್ನು ತಿಳಿಯುವುದಕ್ಕೆ ಎಲ್ಲಾದರೂ ಮೊದಲು ಸ್ತ್ರೀ ತತ್ವವನ್ನೇ ಉಚ್ಚರಿಸುವ ಹಾಗೆ ಹೊಂದಾಣಿಕೆ ಮಾಡಲಾಗಿದೆ. ಜ್ಞಾನ ತಿಳಿದವರೇ ಅಲ್ಲದೆ

ನನ್ನ ಕರ್ಮವೆಂದು ತನ್ನ ಕೈಯನ್ನು ಹಣೆಯಮೇಲೆ ತೋರಿಸುವ ಹಾಗೆ, ಪ್ರಕೃತಿ ಪರಮಾತ್ಮ ವಿಧಾನ ತಿಳಿಯದೆ ಹೋದರೂ ಪ್ರತಿ ಮನುಷ್ಯ ಸ್ತ್ರೀ ತತ್ವವನ್ನು ಮೊದಲು ಉಚ್ಚರಿಸುತ್ತಿದ್ದಾನೆ, ನಂತರ ಪುರುಷ ತತ್ವವನ್ನು ಹೇಳುತ್ತಿದ್ದಾನೆ. ಉದಾಹರಣೆಗೆ ಕೆಲವು ಮಾತುಗಳನ್ನು ನೋಡಿದರೆ ಈ ವಿಧವಾಗಿ ಇವೆ. ಕೈಲಾಸದಲ್ಲಿ ಪಾರ್ವತಿ ಪರಮೇಶ್ವರರು ನಾಟ್ಯವಾಡುತ್ತಿದ್ದಾರೆ, ಅಂದಾಗ ಈ ವಾಕ್ಯದಲ್ಲಿ ಮೊದಲು ಸ್ತ್ರೀ ತತ್ವವಾದ ಪಾರ್ವತಿಯನ್ನು ಹೇಳಿ, ನಂತರ ಪುರುಷನಾದ ಈಶ್ವರನನ್ನು ಹೇಳುವುದು ನಡೆದಿದೆ. ಹಾಗೆ ಸೀತಾರಾಮರ ವಿವಾಹ ನಡೆದಿದೆ ಅಂದಾಗ, ಮೊದಲು ಸೀತೆಯನ್ನು ಹೇಳಿ ನಂತರ ರಾಮನನ್ನು ಕುರಿತು ಹೇಳುವುದು ನಡೆದಿದೆ.

ಈ ವಿಧವಾಗಿ ಎಷ್ಟೋ ವಾಕ್ಯಗಳನ್ನು ನೋಡಿದಾಗ ಅದರಲ್ಲಿ ಸ್ತ್ರೀ ತತ್ವವನ್ನೇ ಮೊದಲು ಇಟ್ಟು ನಂತರ ಪುರುಷತ್ವವನ್ನು ಇಡುವುದು ನಡೆಯುತ್ತಿದೆ. ಅಂತಹ ಕೆಲವು ಪದಗಳನ್ನು ನೋಡಿದರೆ ಹೀಗಿವೆ. ತಾಯಿ ತಂದೆ, ಪ್ರಕೃತಿ ಪುರುಷರು, ಸತಿಪತಿ, ಲಕ್ಷ್ಮಿನರಸಿಂಹ. ಅಷ್ಟೇ ಅಲ್ಲದೆ ಬೀದಿಯಲ್ಲಿ ಪುಟ್ಟಿಯನ್ನು ತಲೆಯಮೇಲೆ ಇಟ್ಟುಕೊಂಡು ಬದನೆಕಾಯಿ ಮಾರುವವನು ಸಹ ಬದನೆ ಕಾಯಮ್ಮೊ ಎಂದು ಸ್ತ್ರೀ ಪದವನ್ನೇ ಉಪಯೋಗಿಸಿ ಹೇಳುವುದು ನಡೆಯುತ್ತಿದೆ. ಈ ವಿಧವಾಗಿ ಪ್ರಕೃತಿ ಎಲ್ಲರಿಗೂ ಪರಮಾತ್ಮನಿಗಿಂತ ಮುಂದಿದೆಯೆಂದು ತಿಳಿಯುತ್ತಿದೆ. ಕಾಣಿಸದ ದೇವರಿಗಿಂತ ಮೊದಲು ಕಾಣಿಸುವ ಪ್ರಕೃತಿಯೇ ಇದೆ. ಆದ್ದರಿಂದ ಎಲ್ಲರೂ ಹಾಗೆ ಹೇಳುವುದು ನಡೆಯುತ್ತಿದೆ. ಎಲ್ಲಾದರೂ ಸ್ತ್ರೀ ಹೆಸರನ್ನು ಮೊದಲು ಹೇಳಿಕೊಳ್ಳುವುದಕ್ಕೆ ಕಾರಣ ಈಗ ಸ್ವಲ್ಪ ಅರ್ಥ ವಾಗಿದೆಯೆಂದುಕೊಳ್ಳುತ್ತೇನೆ. ಮೊದಲು ಪ್ರಭವದಲ್ಲಿ ಹುಟ್ಟಿಸಿರುವುದು ಪ್ರಕೃತಿಯೇ, ಹಾಗೆ ಕೊನೆಯ ಪ್ರಳಯದಲ್ಲಿ ಎಲ್ಲರನ್ನು ಮರಣಿಸುವಂತೆ ಮಾಡುವುದು ಪ್ರಕೃತಿಯೇ. ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಳ್ಳಬೇಕಾಗಿರುವುದೇನೆಂದರೆ! ದೇವರು ಮೊದಲು ನಿನ್ನನ್ನು ಹುಟ್ಟಿಸಲೂ ಇಲ್ಲ, ನಂತರ ಕೊನೆಯಲ್ಲಿ ಸಾಯಿಸಲೂ

ಇಲ್ಲ. ಆದರೆ ಎಲ್ಲದಕ್ಕು ಕಾರಣಾ ಭೂತನು ಮೂಲಕಾರಕನು ಆತನೇ. ಈಗ ಒಂದು ಚಿಕ್ಕ ಉದಾಹರಣೆಯನ್ನು ನೋಡೋಣ.

ಪತಿಗೆ ವಿಧೇಯತೆಯನ್ನು ತೋರಿಸುವ ಸತಿ, ಸತಿಗೆ ಸ್ವತಂತ್ರತೆಯನ್ನು ಕೊಟ್ಟಿರುವ ಪತಿ, ಇಬ್ಬರು ಸಂಸಾರವನ್ನು ಮಾಡುತ್ತಿರುವಾಗ ಅವರಿಗೆ ಕೆಲವರು ಒಳ್ಳೆಯವರು, ಕೆಲವರು ಕೆಟ್ಟವರು ಸಂತಾನವಿದ್ದಾರೆ. ಪತಿ ಸತಿಯನ್ನು ಪೋಷಿಸಿದರೆ, ಮನೆಯಲ್ಲಿನ ಸತಿ ತಮ್ಮ ಮಕ್ಕಳಿಗೆ ಎಲ್ಲ ವಸತಿಗಳನ್ನು ಕಲ್ಪಿಸಿ, ಮಕ್ಕಳ ಎಲ್ಲ ಕೆಲಸಗಳನ್ನು ಮಾಡುತ್ತಿರುವುದು. ಒಂದು ಕಡೆ ಮಕ್ಕಳನ್ನು ಸಕ್ರಮವಾಗಿ ನೋಡಿಕೊಳ್ಳುತ್ತಾ, ಮತ್ತೊಂದು ಕಡೆ ಪತಿಗೆ ಅನುಕೂಲವಾಗಿ ಎಲ್ಲ ಸೇವೆಗಳು ಮಾಡುತ್ತಿರುವುದು. ರಾತ್ರಿಹೊತ್ತು ಪತಿ ನಿದ್ರಿಸುವ ಸಮಯಕ್ಕೆ ಮೊದಲೆ ತಮ್ಮ ಮಕ್ಕಳನ್ನು ನಿದ್ರಿಸುವಂತೆ ಮಾಡುವುದು. ಮಕ್ಕಳ ಕಿರಿಕಿರಿ ಇದ್ದರೆ ಪತಿಗೆ ನಿದ್ರೆ ಬರುವುದಿಲ್ಲವೆಂದು, ಪತಿಗೆ ಅಸೌಕರ್ಯ ಏರ್ಪಡದ ಹಾಗೆ, ಪತಿ ನಿದ್ರೆಗೆ ಬರುವುದಕ್ಕಿಂತ ಮೊದಲೆ ಮಕ್ಕಳನ್ನು ಮಲಗಿಸಿ ಯಾರನ್ನು ಏಳದಹಾಗೆ ಮಾಡುವುದು. ಆಗ ಸತಿ ಮಾಡಿದ ಕೆಲಸಕ್ಕೆ ಪತಿ ಮೆಚ್ಚಿಕೊಂಡು, ಯಾವ ತೊಂದರೆ ಇಲ್ಲದೆ ಮಲಗುವನು. ಇದೇ ವಿಧವಾಗಿ ಪ್ರಕೃತಿ ಸತಿಯಾಗಿ, ಪರಮಾತ್ಮ ಪತಿಯಾಗಿದ್ದು ವಿಶ್ವವೆನ್ನುವ ಗೃಹದಲ್ಲಿ ಸಂಸಾರ ಮಾಡುತ್ತಿದ್ದಾರೆ. ಪತಿಯಾದ ಪರಮಾತ್ಮ ಯಾವುದನ್ನು ಅಂಟಿಸಿಕೊಳ್ಳದೆ ಸಂಸಾರದ ಸಂಬಂಧ ಇಲ್ಲದ ಹಾಗೆ ಇದ್ದಾನೆ. ಸತಿಯಾದ ಪ್ರಕೃತಿ ತಮ್ಮ ಸಂತಾನವಾದ ಜೀವರಾಶಿಗಳನ್ನು ಎಲ್ಲವೂ ತಾನಾಗಿಯೇ ನೋಡಿಕೊಳ್ಳುತ್ತಿದೆ. ಮಕ್ಕಳ ಎಲ್ಲ ಕೆಲಸಗಳನ್ನು ಪ್ರಕೃತಿಯೇ ನೋಡಿಕೊಂಡು ಪರಮಾತ್ಮನಿಗೆ ಯಾವ ಸಂಬಂಧ ಇಲ್ಲದಹಾಗೆ ಮಕ್ಕಳನ್ನು ಪೋಷಿಸುತ್ತಿದೆ. ಪತಿ ಮನೆಗೆ ಬಂದು ನಿದ್ರೆ ಹೋಗುವ ಸಮಯಕ್ಕೆ ಅಂದರೆ ಪರಮಾತ್ಮನಿಗೆ ರಾತ್ರಿ ಸಮಯ ಬರುತ್ತಲೇ ಸಕಲ ಜೀವರಾಶಿಗಳನ್ನು ಪ್ರಕೃತಿಯೇ ನಿದ್ರೆಯಲ್ಲಿರಿಸಿ ಇಲ್ಲದ ಹಾಗೆ ಮಾಡುತ್ತಿದೆ. ಪ್ರಕೃತಿ ತನ್ನ ಸಂತಾನವಾದ ಜೀವರಾಶಿಗಳನ್ನು ಅವ್ಯಕ್ತ ಮಾಡುತ್ತಿದೆ. ಪ್ರಕೃತಿ ಪ್ರಳಯವನ್ನು ಸೃಷ್ಟಿಸಿ ಜೀವರಾಶಿಗಳನ್ನು ಅಂತ್ಯಗೊಳಿಸುತ್ತದೆ. ಪ್ರಳಯದಲ್ಲಿ

ಸತ್ತುಹೋದ ಜೀವಿಗಳು ನಂತರ ಜನ್ಮಕ್ಕೆ ಹೋಗದೆ ಅವ್ಯಕ್ತವಾಗಿರುವರು. ದೇವರ ರಾತ್ರಿಯಲ್ಲಿ ಪ್ರಪಂಚ ಇರುವುದಿಲ್ಲ. ಆದ್ದರಿಂದ ಮೊದಲು ಪ್ರಕೃತಿಯಲ್ಲಿ ಹುಟ್ಟಿದ ಜೀವರಾಶಿಗಳೆಲ್ಲ ಕೊನೆಯಲ್ಲಿ ಪ್ರಕೃತಿಯಲ್ಲಿಯೇ ಸತ್ತುಹೋಗಿ ಪ್ರಕೃತಿಯಲ್ಲಿಯೇ ಬೆರೆತುಹೋಗುತ್ತಿವೆ. ಪ್ರಳಯದಲ್ಲಿ ಜೀವರಾಶಿಗಳೆಲ್ಲ ಪ್ರಕೃತಿಯಲ್ಲಿ ಬೆರೆತು ಕಾಣಿಸಿದಹಾಗೆ ಹೋಗುತ್ತಿವೆ. ಆದರೆ ಪೂರ್ತಿ ನಾಶವಾಗಿ ಹೋಗಿಲ್ಲ. ಸತ್ತುಹೋದ ಜೀವಿಗಳೆಲ್ಲರೂ ಅವ್ಯಕ್ತವಾಗಿ ಇರಬೇಕೆಂದರೆ ಪ್ರಕೃತಿಯು ಸಹ ಅವ್ಯಕ್ತವಾಗಿ ಹೋಗಬೇಕು. ಆದ್ದರಿಂದ ಸಾವಿರ ಯುಗಗಳ ಕಾಲ ದೇವರ ಹಗಲು ಮುಗಿದ ನಂತರ ದೇವರ ರಾತ್ರಿ ಮೊದಲಾಗುವ ಸಮಯದಲ್ಲಿ ಪ್ರಕೃತಿ ಸಹ ಇಲ್ಲದೆ ಕಾಣಿಸದ ಹಾಗೆ ಹೋಗುತ್ತದೆ. ಪ್ರಳಯದಲ್ಲಿ ಇರುವವು ಇಲ್ಲದೆ ಹೋಗುತ್ತವೆ. ಅಷ್ಟೇ ಆದರೆ ಪೂರ್ತಿಯಾಗಿ ನಾಶವಾಗಿ ಹೋಗಿವೆ ಎಂದು ಅಂದುಕೊಳ್ಳಬಾರದು. ಯಾವ ಜೀವರಾಶಿ ನಾಶವಾದರೂ ಅದು ದೇವರೊಳಗೆ ಐಕ್ಯವಾಗಿರಬೇಕಾಗುತ್ತದೆ. ಪ್ರಳಯ ಹೊಂದಿದ ಜೀವಿಗಳು ತಿರುಗಿ ಪ್ರಭವದಲ್ಲಿ ಹುಟ್ಟಬೇಕಾದ ಕೆಲಸವಿರುತ್ತದೆ. ಆದ್ದರಿಂದ ವ್ಯಕ್ತವಾಗಿರುವ ಎಲ್ಲವೂ ಅವ್ಯಕ್ತವಾಗಿ ಬದಲಾವಣೆ ಹೊಂದುತ್ತಿವೆ, ಪೂರ್ತಿ ಇಲ್ಲದೆ ಹೋಗಿಲ್ಲ. **ಈ ಪ್ರಳಯ ಒಂದು ವಿಧವಾಗಿ ಜೀವಿಗೆ ತಾತ್ಕಾಲಿಕ ಮರಣವಂತಹದೆಂದು ಹೇಳಬಹುದು.**

ದೇವರ ಹಗಲು ಕಾಲ ಸಾವಿರಯುಗಗಳೆಂದು, ಹಾಗೆ ರಾತ್ರಿ ಕಾಲ ಸಾವಿರಯುಗಗಳೆಂದು ಹೇಳಿಕೊಂಡಿದ್ದೇವೆ. ದೇವರ ಹಗಲು ಸಾವಿರ ಯುಗಗಳು ಕಳೆದುಹೋದ ನಂತರ ಪ್ರಳಯವಾಗಿ ಜೀವರಾಶಿಗಳ ಶರೀರಗಳೆಲ್ಲ ನಾಶವಾಗುತ್ತವೆ. ಜೀವಿಗಳು ಮಾತ್ರ ಮರಣಹೊಂದಿ ಪ್ರಕೃತಿಯಲ್ಲಿಯೇ ಬೆರೆತು ಹೋಗುತ್ತಿದ್ದಾರೆ. ದೇವರ ರಾತ್ರಿ ಸಾವಿರ ಯುಗಗಳು ಮೇಲೆ ಆಕಾಶವಾಗಲಿ, ಕೆಳಗೆ ಭೂಮಿಯಾಗಲಿ, ಮಧ್ಯದಲ್ಲಿ ಗಾಳಿಯಾಗಲಿ, ನೀರಾಗಲಿ, ಬೆಂಕಿಯಾಗಲಿ ಯಾವುವು ಇರುವುದಿಲ್ಲ. ನಮ್ಮ ಮುಂದಿರುವ ಶೂನ್ಯವೂ ಸಹ ಇರುವುದಿಲ್ಲ. ಅಂತಹ ಸ್ಥಿತಿ ಹೇಗೆ ಇರುತ್ತದೋ ಊಹಿಸಲು ಸಹ ಆಗುವುದಿಲ್ಲ. ಆ ಸ್ಥಿತಿಯನ್ನು

ಯಾವ ವಿಧವಾಗಿ ಸಹ ಹೋಲಿಸಿಕೊಳ್ಳಲಾರೆವು. ಅಂತಹ ಸಮಯದಲ್ಲಿ ಉಳಿದಿರುವುದು ಒಂದೇ ಒಂದು ಪರಮಾತ್ಮ. ದೇವರ ರಾತ್ರಿ ಸಾವಿರ ಯುಗಗಳು ಮುಗಿದ ನಂತರ ಪುನಃ ಪ್ರಭವ ಮೊದಲಾಗುವುದು. ಪ್ರಭವ ಎಂದರೆ ಪುನಃ ಸೃಷ್ಠಿ ಪ್ರಾರಂಭವಾಗುವುದು. ಆಗ ಮೊದಲು ಪ್ರಕೃತಿಯಲ್ಲಿನ ಪಂಚ ಭೂತಗಳು ಅವ್ಯಕ್ತದಿಂದ ವ್ಯಕ್ತದೊಳಗೆ ಬರುವವು. ಪ್ರಕೃತಿಯ ಕೆಲಸದಿಂದ ಅಲ್ಲಿಯವರೆಗು ಇಲ್ಲದ ಜೀವಿಗಳು ಪುನಃ ಶರೀರ ಧರಿಸಿ ಜನ್ಮ ತೆಗೆದುಕೊಂಡು ಜೀವನವನ್ನು ಪುನಃ ಪ್ರಾರಂಭಿಸುವರು. ಅದೇ ದೇವರ ಹಗಲು ಕಾಲ. ಪ್ರಕೃತಿಯಿಂದ ನಡೆಯುವ ಪ್ರಳಯವಾಗಲಿ, ಪ್ರಭವವಾಗಲಿ ಒಂದು ಕ್ಷಣದಲ್ಲಿ, ಒಂದೇ ಬಾರಿ ಯಾವುದು ನಡೆಯುವುದಿಲ್ಲ. ಪ್ರಳಯ ನಡೆಯುವಾಗ ಸ್ವಲ್ಪ ಸಮಯ ಹಿಡಿಸುತ್ತದೆ. ಹಾಗೆ ಪುನಃ ಜೀವರಾಶಿಗಳು ಎಲ್ಲ ಹುಟ್ಟುವುದಕ್ಕು ಸಹ ಸ್ವಲ್ಪ ಸಮಯ ಹಿಡಿಸುತ್ತದೆ. ಅದನ್ನೇ ಪ್ರಳಯ ಪ್ರಭವಗಳ ಸಂಧಿಕಾ ಎನ್ನುತ್ತೇವೆ. ದಿನಕ್ಕೆ ಸಂಧಿಕಾಲ ಇದ್ದಹಾಗೆ ಪ್ರಳಯಕ್ಕು ಸಹ ಸಂಧಿಕಾಲ ಇದೆ. ದಿನಕ್ಕಿರುವ ಸಂಧಿಕಾಲವನ್ನು ಸಂಧ್ಯಕಾಲ ಎನ್ನುತ್ತಿದ್ದೇವೆ. ಪೂರ್ವವು ಸಂಧಿಕಾಲ ಎಂಬ ಮಾತು ಈ ದಿನ ಸಂಧ್ಯವೇಳೆಯಾಗಿದೆ. ಒಬ್ಬರಿಗೊಬ್ಬರು ಕಲೆತು ಕೊಳ್ಳುವುದನ್ನು ಸಂಧಿ ಎನ್ನುತ್ತೇವೆ. ಹಾಗೆ ರಾತ್ರಿ ಹಗಲು ಕಲೆತುಕೊಳ್ಳುವ ಕಾಲವನ್ನು ಸಂಧಿಕಾಲ ಎನ್ನುತ್ತೇವೆ. ಸಾಧಾರಣವಾಗಿ ಬೆಳಗಿನ ಜಾವದಲ್ಲಿ ಒಬ್ಬೊಬ್ಬರು ಒಂದೊಂದು ವಿಧವಾಗಿ ಮುಂದೆ ಹಿಂದೆ ಏಳುವಂತೆ, ಹಾಗೆ ರಾತ್ರಿ ವೇಳೆ ಮುಂದೆ ಹಿಂದೆ ಮಲಗಿಕೊಂಡ ಹಾಗೆ ಪ್ರಳಯದ ಸಂಧ್ಯ (ಸಂಧಿ) ಕಾಲದಲ್ಲಿ ಮುಂದೆ ಹಿಂದೆ ಜೀವಾತ್ಮ ಇಲ್ಲದೆ ಹೋಗುವುದು ನಡೆಯುತ್ತಿದೆ. ಹಾಗೆ ಪ್ರಭವದ ಸಂಧ್ಯಕಾಲದಲ್ಲಿ ಮುಂದೆ ಹಿಂದೆ ಹುಟ್ಟುವುದು ನಡೆಯುತ್ತಿದೆ. ಪ್ರಳಯ ಪ್ರಭವಗಳ ಸಂಧ್ಯಕಾಲ ಎಲ್ಲರಿಗೂ ಇವೆಯೆಂದು ತಿಳಿಯಬೇಕು.

ಮೊಟ್ಟಮೊದಲು ಪ್ರಭವ ಅಥವಾ ಸೃಷ್ಠಿ ದೇವರಿಂದ ಸೃಷ್ಠಿಸಲ್ಪಟ್ಟಾಗ ಆದಿತ್ಯವಾರ (ಭಾನುವಾರ) ದಿಂದಲೇ ಆರಂಭವಾಗುತ್ತದೆ. ಹಾಗೆ ಈಗ ಎಷ್ಟು ಕಲ್ಪಗಳು ಬದಲಾದರೂ ಮೊದಲನೆಯ ಹಗಲು ಭಾನುವಾರದಿಂದಲೆ

ಪ್ರಾರಂಭವಾಗುತ್ತದೆ, ಅದರಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಹಾಗೆ ಸೃಷ್ಠಿ ಪ್ರಾರಂಭ ಕೃತಯುಗದಿಂದಲೇ ಮೊದಲಾಗುತ್ತದೆ. ಹಾಗೆ ಪ್ರಾರಂಭವಾದ ಮೊದಲ ದಿನವನ್ನು ಯುಗಾದಿ ಎನ್ನಲಾಗುತ್ತದೆ. ಯುಗಾದಿ ಎಂದರೆ ಯುಗದ ಆದಿಯಲ್ಲಿ ಬರುವ ದಿನವೆಂದು ಅರ್ಥ. ಯುಗಾದಿ ಭಾನುವಾರದಿಂದಲೆ ಪ್ರಾರಂಭವಾಗಿದೆ. ಯುಗವನ್ನು ಸಂವತ್ಸರ (ವರ್ಷ) ಗಳಿಂದಲೇ ಲೆಕ್ಕಿಸುತ್ತಿದ್ದೇವೆ. ಆದ್ದರಿಂದ ಸಂವತ್ಸರ (ವರ್ಷ) ದ ಮೊದಲನೆ ದಿನಕ್ಕೆ ಯುಗಾದಿ ಎಂದು ಹೆಸರು ಇಟ್ಟಿದ್ದೇವೆ. ಆದರೇ ಧರ್ಮಗಳು ಅಧರ್ಮಗಳಾಗಿ ಬದಲಾದಹಾಗೆ, ಇಂದೂ ಎಂಬ ಪದ ಹಿಂದೂ ಎಂಬ ಪದವಾಗಿ ಬದಲಾದಹಾಗೆ, ಯುಗಾದಿ ಎಂಬ ಪದವನ್ನು ಈ ದಿನ ಉಗಾದಿ ಎಂದು ಉಚ್ಛರಿಸುವುದೂ, ಬರೆಯುವುದು ನಡೆಯುತ್ತಿದೆ. ಹಿಂದೂ ಎಂಬ ಶಬ್ಧವು ಅರ್ಥವಿಲ್ಲದಾದರೂ, ಇಂದೂ ಎನ್ನುವ ಶಬ್ದ ಅರ್ಥದಿಂದ ಕೂಡಿಕೊಂಡಿದ್ದರೂ, ಹೇಳಿದರು ಕೇಳದೆ ನಾವು ಹಿಂದುಗಳೆ ಎಂದು ಕೆಲವರು ಮೂರ್ಖರಂತೆ ಅಂದಹಾಗೆ, ಉಗಾದಿ ಎಂಬ ಶಬ್ದ ಅರ್ಥ ವಿಲ್ಲದ್ದೆಂದು ಹೇಳಿದರೂ ಕೇಳದೆ ಉಗಾದಿಯೆಂದೆ ಹೇಳುತ್ತಿದ್ದಾರೆ. ಹಿಂದೂ (ಇಂದೂ) ಧರ್ಮರಕ್ಷಕರೆಂದು ಹೆಸರು ಇಟ್ಟುಕೊಂಡಿರುವವರೆ ಯಾವುದೇ ಜ್ಞಾನವನ್ನು ಧರ್ಮಗಳನ್ನು ತಿಳಿಯದವರಾಗಿ ಮೂರ್ಖತ್ವದಿಂದ ಮಾತ ನಾಡುತ್ತಿದ್ದಾರೆ. ಧರ್ಮದ ಪ್ರಕಾರ ಪೂರ್ವದಲ್ಲಿ ಹಿಂದುಗಳೆಲ್ಲರು ಇಂದೂಗಳಾಗಿ, ಉಗಾದಿಯನ್ನು ಯುಗಾದಿಯೆಂದು ಕರೆಯುತ್ತಿದ್ದರು.

ಪ್ರಭವದಿಂದ ಪ್ರಳಯದವರೆಗೂ ಜೀವರಾಶಿಗಳ ಜೀವನ ವಿಧಾನವನ್ನೆಲ್ಲ ಪ್ರಕೃತಿಯೇ ತನ್ನ ಪರ್ಯವೇಕ್ಷಣೆಯಲ್ಲಿ ಇಟ್ಟುಕೊಂಡು ನೋಡುತ್ತಿದೆ. ದೇವರನ್ನು ಮಾತ್ರ ಎಲ್ಲದಕ್ಕು ಮೂಲಪುರುಷನೆಂದು ಹೇಳಬಹುದು. ಆದರೆ ಎಲ್ಲಿಯೂ ದೇವರ ಪಾತ್ರ ಕಾಣಿಸುವುದಿಲ್ಲ. ಒಬ್ಬ ಮನುಷ್ಯನ ಜೀವನದಲ್ಲಿ ಜ್ಞಾನವಾಗಲಿ, ಅಜ್ಞಾನವಾಗಲಿ, ಜನನ ಮರಣಗಳಾಗಲಿ, ಮೋಕ್ಷವನ್ನಾಗಲಿ ಸ್ವತಃವಾಗಿ ಪ್ರಕೃತಿಯೇ ಕೊಡುತ್ತಿದೆ. ಇದು ಕೆಲವರಿಗೆ ವಿಚಿತ್ರವಾಗಿ ಕಂಡರೂ ನೂರಕ್ಕೆ ನೂರರಷ್ಟು ಸತ್ಯ. ಆ ವಿಧವಾದ ಅಧಿಕಾರವನ್ನು ದೇವರೆ ಪ್ರಕೃತಿಗೆ ಏರ್ಪಡಿಸಿದ್ದಾನೆ.

ದೇವರು ಯಾವ ಲೆಕ್ಕಕ್ಕು ಸಿಗುವುದಿಲ್ಲ. ಆತನು ತಿಳಿಸಿದ ಧರ್ಮಗಳಿಗೆ ಮಾತ್ರವೆ ಆತನು ತಿಳಿಯುವುದು. ದೇವರ ಧರ್ಮಗಳನ್ನು ಆಧಾರ ಮಾಡಿಕೊಂಡು ಪ್ರವರ್ತಿಸುವವನಿಗೆ ಮಾತ್ರವೆ ಮುಕ್ತಿ (ಮೋಕ್ಷ) ಅಥವಾ ಪರಲೋಕವು ಲಭಿಸುವ ಅವಕಾಶವಿದೆ. ದೇವರು ಭಗವಂತನಾಗಿ ಬಂದು ಹೇಳಿದ ಮಾತುಗಳನ್ನು ಅನುಸರಿಸಿ ಸಾವಿರ ಯುಗಗಳ ಕಾಲ ಒಂದು ದಿನವೆಂದು ತಿಳಿದಿದೆ. ಆದರೆ ಆತನ ಆಯಸ್ಸು ಯಾರಿಗೂ ತಿಳಿದಿಲ್ಲ. ಯೋಚಿಸಿ ಹೇಳಿದರೆ ಆತನಿಗೆ ಆಯಸ್ಸು ಎನ್ನುವುದೇ ಇಲ್ಲ. ಏಕೆಂದರೆ! ಆತನು ಕಾಲಸ್ವರೂಪನು. ಕಾಲ ಎಲ್ಲವನ್ನು ಹರಿಸುವುದು, ಆದರೆ ತಾನು ಹರಿಸಲ್ಪಡುವುದಲ್ಲ, ಆದ್ದರಿಂದ ಆತನು ತನ್ನ ಮಾತುಗಳಲ್ಲಿ ತನ್ನನ್ನು ಅವ್ಯಯನೆಂದು ಹೇಳಿದ್ದಾನೆ. ವ್ಯಯ ಎಂದರೆ ನಾಶ ಎಂದು, ಅವ್ಯಯ ಎಂದರೆ ನಾಶವಿಲ್ಲದ್ದು ಎಂದರ್ಥ. ಆದ್ದರಿಂದ ಪ್ರಕೃತಿ ಲೆಕ್ಕದಲ್ಲಿ 108 ಕೋಟಿ ಸಂವತ್ಸರಗಳು ಆತನಿಗೆ ಒಂದು ಹಗಲು, 108 ಕೋಟಿ ಸಂವತ್ಸರಗಳು ಒಂದು ರಾತ್ರಿಯೆಂದು ಲೆಕ್ಕಿಸಲಾಗುತ್ತಿದೆ. ಇದು ಪ್ರಕೃತಿ ಕಡೆಯಿಂದ ಹೇಳಲ್ಪಡುವ ಲೆಕ್ಕವೇ ಹೊರತು ದೇವರಕಡೆಯಿಂದ ಹೇಳಿರುವುದಲ್ಲ. ದೇವರು ಯಾವಾಗಲೂ ಅವ್ಯಯನೇ ಮತ್ತು ಅವ್ಯಕ್ತನೇ.

ಈಗ ದೇವರಿಗೆ ಒಂದು ಹಗಲು ಕಾಲವಾದ 108 ಕೋಟಿ ಸಂವತ್ಸರ ಗಳನ್ನು ಪ್ರಕೃತಿಕಡೆಯಿಂದಲೇ ನೋಡಿ, ಹೇಗೆ ಅಷ್ಟುಕಾಲ ಹಗಲಾಗಿ ಲೆಕ್ಕಿಸಲಾಗುತ್ತದೋ ತಿಳಿದುಕೊಳ್ಳಬೇಕು. ಪ್ರಕೃತಿಯನ್ನು ಚೆನ್ನಾಗಿ ತಿಳಿದುಕೊಂಡರೆ ಪ್ರಕೃತಿ ಎರಡು ಭಾಗಗಳಾಗಿ ಇದೆ. ಒಂದು ಚರ ಪ್ರಕೃತಿ, ಎರಡು ಅಚರ ಪ್ರಕೃತಿ ಎನ್ನುವ ಹೆಸರುಗಳು ಇವೆ. ಜೀವರಾಶಿಗಳ ಶರೀರಗಳಾಗಿ ಇರುವ ಪ್ರಕೃತಿಯನ್ನು ಬದಲಾವಣೆ ಹೊಂದುವ ಪ್ರಕೃತಿಯೆಂದು, ಅದನ್ನೇ ಚರ ಪ್ರಕೃತಿಯೆಂದು ಹೇಳಬಹುದು. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯನ್ನು ಪಂಚಭೂತಗಳಾಗಿ ನಮಗೆ ಕಾಣಿಸುವ ಪ್ರಕೃತಿಯನ್ನು ಬದಲಾವಣೆಯಾಗದ ಪ್ರಕೃತಿಯೆಂದು, ಅದನ್ನೇ ಅಚರ ಪ್ರಕೃತಿಯೆಂದು ಹೇಳಬಹುದು. ಅಚರ ಪ್ರಕೃತಿಯಾದ ಪಂಚಭೂತಗಳು ಪ್ರಪಂಚದಲ್ಲಿ ಚರ ಪ್ರಕೃತಿಯಾದ ಶರೀರಗಳನ್ನು

ಧರಿಸಿದ ಜೀವರಾಶಿಗಳು ಬದುಕುತ್ತಿವೆ. ಅಚರ ಪ್ರಕೃತಿಯನ್ನು ಅನುಸರಿಸಿ ರಾತ್ರಿ ಹಗಲು ಏರ್ಪಡುತ್ತಿವೆ. ಚರ ಪ್ರಕೃತಿಯಲ್ಲಿನ ಜೀವಾತ್ಮನು ರಾತ್ರಿ ಹಗಲು ಕಾಲದಲ್ಲಿ ಬದುಕುತ್ತಿದ್ದಾನೆ. ಕರ್ಮ ಬಂಧನದಲ್ಲಿ ಸಿಕ್ಕಿಕೊಂಡ ಜೀವಾತ್ಮನನ್ನು ಶರೀರದ ಹೊರಗೆ ಅಚರ ಪ್ರಕೃತಿ, ಶರೀರದ ಒಳಗೆ ಚರ ಪ್ರಕೃತಿ ಆಡಿಸುತ್ತಿವೆ. ಜ್ಞಾನ ಬೇಕಾಗಿರುವುದು ಜೀವಿಗೆ, ಮೋಕ್ಷ ಬೇಕಾಗಿರುವುದು ಜೀವಿಗೆ, ಆದ್ದರಿಂದ ದೈವತ್ವವನ್ನು ತಿಳಿಯಬೇಕಾಗಿರುವವನು ಜೀವಾತ್ಮನೆ. ಈಗ ಹೊರಗೆ ಪ್ರಕೃತಿಯಲ್ಲಿನ ದಿನಗಳನ್ನು, ಸಂವತ್ಸರಗಳನ್ನು, ಯುಗಗಳನ್ನು ತಿಳಿಯಬೇಕೆಂದರೆ ಜೀವಾತ್ಮನು ಒಳಗೆ ಪ್ರಕೃತಿಯಿಂದಲೇ ತಿಳಿಯಬಹುದು. ಶರೀರವಾಗಿರುವ ಪ್ರಕೃತಿಯನ್ನು ವಿಭಜಿಸಿದರೆ ಪಂಚಭೂತಗಳಾಗಿ ಬೇರ್ಪಟ್ಟು ಹೋಗುತ್ತದೆ. ಆದ್ದರಿಂದ ಅದು ಹೊರಗಿನ ಪ್ರಕ್ರತಿಯಾಗಿಯೇ ತಿಳಿಯುತ್ತಿದೆ. ಶರೀರ ಮೊತ್ತವು ಚರ ಪ್ರಕೃತಿಯೇ ಆದರೂ ಅದರಲ್ಲಿನ ಭಾಗಗಳು ಸಹ ಪಂಚಭೂತಗಳೆಂದೇ ತಿಳಿದಿದೆ. ಪಂಚಭೂತ ಗಳಾಗಿಯೇ ಅಲ್ಲದೆ ಮಾಯೆ ರೂಪವಾಗಿರುವ ಪ್ರಕೃತಿ ಜೀವನಿಗೆ ಹತ್ತಿರವಾಗಿರುವ ಪ್ರಕೃತಿಯೆಂದು ಹೇಳಬಹುದು. ಮಾಯೆ ರೂಪದಲ್ಲಿರುವ ಪ್ರಕೃತಿ ಪಂಚಭೂತ ಗಳಾಗಿ ವಿಭಜಿಸದೆ, ದ್ವಾದಶ ಗುಣಗಳಾಗಿ ವಿಭಜಿಸಲ್ಪಡುತ್ತದೆ. ಪ್ರಪಂಚ ರೂಪದಲ್ಲಿರುವ ಅಚರ ಪ್ರಕೃತಿ, ಶರೀರ ರೂಪದಲ್ಲಿರುವ ಚರ ಪ್ರಕೃತಿ ಎರಡು ಪಂಚಭೂತಗಳಾಗಿ ವಿಭಜಿಸಿದರೆ, ಮಾಯೆಯಾಗಿ ರೂಪಾಂತರ ಹೊಂದಿದ ಪ್ರಕೃತಿ ಮಾತ್ರ ಹನ್ನೆರಡು ಗುಣಗಳಾಗಿ ತಿಳಿಯುತ್ತದೆ. ಒಳಗೆ ಹನ್ನೆರಡು ಗುಣಗಳಿಂದಲೇ ಜೀವಾತ್ಮನು ಜೀವಿಸುತ್ತಿದ್ದಾನೆ. ಹಾಗೆ ಹೊರಗೆ ಮನುಷ್ಯ ಪಂಚಭೂತಗಳ ಪ್ರಪಂಚದಲ್ಲಿಯೇ ಜೀವಿಸುತ್ತಿದ್ದಾನೆ. ತಲೆಯಲ್ಲಿರುವ ಗುಣಚಕ್ರ ದಲ್ಲಿಯೆ ಜೀವಿಯೇ ಶಾಶ್ವತವಾಗಿ ಇರುತ್ತಿದ್ದಾನೆ. ಹಾಗೆ ಹೊರಗೆ ಮನುಷ್ಯ ಶಾಶ್ವತವಾಗಿ ಪ್ರಪಂಚದಲ್ಲಿಯೇ ಬದುಕುತ್ತಿದ್ದಾನೆ. ಎಷ್ಟು ಜನ್ಮಗಳು ಬದಲಾಯಿ ಸಿದರೂ ಜೀವಿಯು ಗುಣಚಕ್ರವನ್ನು ಬಿಟ್ಟು ಹೋಗದೆ ಅಲ್ಲಿಯೇ ಇದ್ದಾನೆ. ಹಾಗೆ ಎಷ್ಟು ಜನ್ಮಗಳು ಎತ್ತಿದರೂ ಹೊರಗೆ ಮನುಷ್ಯ ಶಾಶ್ವತವಾಗಿ ಪ್ರಪಂಚದಲ್ಲಿ ಇರುತ್ತಿದ್ದಾನೆ. ಒಳಗೆ ಜೀವಿಯು ಶರೀರಗಳನ್ನು ಬದಲಾಯಿಸಿದರೂ

ಗುಣಚಕ್ರವನ್ನು ಬಿಟ್ಟು ಹೋಗಲಾರನು. ಹಾಗೆಯೇ ಹೊರಗೆ ಮನುಷ್ಯ ಎಷ್ಟು ಬಾರಿ ಮರಣಿಸಿದರೂ ಅಷ್ಟುಸಲ ಪ್ರಪಂಚದಲ್ಲಿಯೇ ಹುಟ್ಟುತ್ತಾ ಪ್ರಪಂಚವನ್ನು ಬಿಟ್ಟು ಹೋಗಲಾರನು. ಆದ್ದರಿಂದ ಹೊರಗಿನ ಪ್ರಪಂಚದಲ್ಲಿ 108 ಕೋಟಿ ಸಂವತ್ಸರಗಳು ಜೀವನ ಸಾಗಿಸುವುದಕ್ಕೆ ಒಳಗೆ ಮೂಲವಿದ್ದಹಾಗೆ ತಿಳಿಯುತ್ತಿದೆ. ಹೊರಗೆ ಪ್ರಕೃತಿಯಲ್ಲಿ ಮನುಷ್ಯನಾಗಿಯೊ, ಜಂತುವಾಗಿಯೊ ಇನ್ನು ಯಾವುದೊ ಒಂದು ವಿಧವಾಗಿಯೋ ಬದುಕುತ್ತಿರುವವನು ಒಳಗೆ ಜೀವಾತ್ಮನಾಗಿ ಮಾಯೆ ಎಂಬ ಗುಣಗಳಲ್ಲಿ ಬದುಕುತ್ತಿದ್ದಾನೆ. ಆದ್ದರಿಂದ ಹೊರಗಿನ ಪ್ರಕೃತಿಗೆ, ಒಳಗಿನ ಮಾಯೆಗೆ ಸಂಬಂಧ ಇರುವಹಾಗೆ, ಹೊರಗೆ ಪ್ರಕೃತಿ ಆಯುಸ್ಸಿಗು ಒಳಗೆ ಮಾಯೆ ಆಯುಸ್ಸಿಗು ಸಂಬಂಧವಿದೆಯೆಂದು ಹೇಳಬಹುದು. ಎಲ್ಲದಕ್ಕು ಒಳಗೆ ಮೂಲವಿದೆಯೆನ್ನುವ ಸೂತ್ರದ ಪ್ರಕಾರ **"ಊರ್ಧ್ವಮೂಲ"** ಎಂದು ಗೀತಾವಾಕ್ಯದ ಪ್ರಕಾರ ಮೇಲೆ ತಲೆಯಲ್ಲಿಯೇ ಪ್ರಕೃತಿ ಆಯುಸ್ಸು ಇದೆಯೆಂದು ಅರ್ಥವಾಗುತ್ತದೆ. ಪ್ರಕೃತಿ ಆಯುಸ್ಸು **108 ಕೋಟಿ ಸಂವತ್ಸರಗಳು ದೇವರ ಹಗಲು (ಕಾಲವಾಗಿ) ಹೇಳಿಕೊಂಡಿದ್ದೇವೆ.** ಈಗ ಒಳಗಿರುವ ಪ್ರಕೃತಿ ಆಯುಸ್ಸನ್ನು ಕುರಿತು ಪರಿಶೋಧಿಸಿ ತಿಳಿದುಕೊಳ್ಳೋಣ.

ಪ್ರತಿ ಮನುಷ್ಯನ ತಲೆ ಮಧ್ಯ ಭಾಗದಲ್ಲಿ ಹಣೆಭಾಗಕ್ಕೆ ಸಮಾನವಾಗಿರುವ ನಾಲ್ಕು ಚಕ್ರಗಳ ಸಮುದಾಯದಲ್ಲಿ ಕೆಳಗಿನ ಚಕ್ರ ಗುಣಚಕ್ರ. ಆ ಗುಣಚಕ್ರ ನಾಲ್ಕು ಭಾಗಗಳಾಗಿ ಇದೆ. ಅದರಲ್ಲಿ ಹೊರಗಿನಿಂದ ಮೊದಲು ಮೂರು ಭಾಗಗಳು ಗುಣಗಳಿಂದ ತುಂಬಿಕೊಂಡಿವೆ. ಒಂದೊಂದು ಭಾಗದಲ್ಲಿ ಹನ್ನೆರಡು ಗುಣಗಳಿರುವಹಾಗೆ ತಿಳಿದುಕೊಂಡಿದ್ದೇವೆ. ಅದರಲ್ಲಿ ಆರು ಕೆಟ್ಟ ಗುಣಗಳೂ, ಆರು ಒಳ್ಳೆಯ ಗುಣಗಳೆಂದು ಸಹ ತಿಳಿದಿದೆ. ಈಗ ದೇವರ ಒಂದು ಹಗಲುಕಾಲ ಪ್ರಕೃತಿಯ ಆಯುಸ್ಸಾಗಿ ಹೇಳಿಕೊಳ್ಳುತ್ತಿದ್ದೇವೆ ಆದರೆ ಆ ವಿವರವನ್ನು ತಿಳಿದುಕೊಳ್ಳುವುದಕ್ಕೆ ದೇವರಕಡೆಯಿಂದ ದೇವರ ಸಂಖ್ಯೆಯೆಂದು ಹೇಳುತ್ತಿರುವ ಒಂಬತ್ತು (9) ಸಂಖ್ಯೆಯನ್ನು ತೆಗೆದುಕೊಳ್ಳೋಣ. ಹಾಗೆ ತಲೆಯಲ್ಲಿನ ಮಾಯೆಕಡೆಯಿಂದ ಗುಣಗಳ ಹನ್ನೆರಡು (12) ಸಂಖ್ಯೆಯನ್ನು ತೆಗೆದುಕೊಳ್ಳೋಣ.

ಈಗ 12 ಗುಣಗಳನ್ನು 9 ಸಂಖ್ಯೆಯಿಂದ ಗುಣಿಸೋಣ. ಹಾಗೆ ಗುಣಿಸಿದಾಗ ಒಟ್ಟು 108 ಸಂಖ್ಯೆ ಬಂದಿದೆ. 12 X 9 = 108 ಈ ವಿಧವಾಗಿ ಹನ್ನೆರಡು ಗುಣಗಳು ಭಾಗಿಸುವುದಿಲ್ಲ, ಗುಣಿಸಲಾಗಿದೆ. ದೇವರ ಸಂಖ್ಯೆಯಿಂದ ಗುಣಿಸಲ್ಪಟ್ಟಿವೆ ಆದ್ದರಿಂದ ಅವುಗಳಿಗೆ ಗುಣಗಳೆಂದು ಹೆಸರು ಬಂದಿದೆ. ಈ ವಿಧವಾಗಿ ಎಂದಿಗಾದರೂ ದೇವರ ಸಂಖ್ಯೆಯಿಂದಲೇ ಮಾಯೆ ಸಂಖ್ಯೆ ಗುಣಿಸಲಾ ಗುತ್ತದೆಂದು ಮೊದಲೆ ಮಾಯೆ ಭಾಗದಲ್ಲಿನ ಹನ್ನೆರಡು ಭಾಗಗಳಿಗೆ 12 ಗುಣಗಳೆಂದು ಹೆಸರು ಇಡಲಾಗಿದೆಯೆಂದು ಅರ್ಥಮಾಡಿಕೊಳ್ಳಬೇಕು. ಏಕ ಸಂಖ್ಯೆಗಳಲ್ಲಿ ದೊಡ್ಡದು ಒಂಬತ್ತು (9). ಒಂಬತ್ತನ್ನು ದೇವರ ಸಂಖ್ಯೆಯಾಗಿ ಏಕೆ ಹೋಲಿಸಿಕೊಂಡಿದ್ದೇವೆಂದು ಚೆನ್ನಾಗಿ ಅರ್ಥವಾಗಬೇಕೆಂದರೆ ನಮ್ಮ ರಚನೆಗಳಲ್ಲಿನ **"ಸೃಷ್ಠಿಕರ್ತಕೋಡ್ 963"** ಎಂಬ ಚಿಕ್ಕ ಗ್ರಂಥವನ್ನು ಓದಬೇಕು. ಗುಣಭಾಗದೊಳಗಿನ ಒಂದು ಗುಣ ಒಂಭತ್ತು ಭಾಗಗಳಾಗಿ ವಿಭಜಿಸಿ, ಒಂಭತ್ತು ಭಾಗಗಳು ಸಮಾನವಾಗಿ ಇಲ್ಲದೆ ಒಂಭತ್ತು ಸಂಖ್ಯೆ ಒಂದರಿಂದ ಹೇಗೆ ದೊಡ್ಡದಾಗಿದೆಯೊ ಹಾಗೆ ಒಂಭತ್ತು ಭಾಗಗಳು ಒಂದು ಚಿಕ್ಕದಾಗಿ ಇದ್ದೂ ಅದರ ನಂತರ ಎರಡನೆಯದು ಮೊದಲನೆಯದಕ್ಕಿಂತ ಸ್ವಲ್ಪ ದೊಡ್ಡ ಪರಿಮಾಣದಲ್ಲಿ ಇದ್ದು, ನಂತರ ಮೂರನೆಯದು ಎರಡನೆಯದಕ್ಕಿಂತ ದೊಡ್ಡದಾಗಿ, ನಂತರ ನಾಲ್ಕನೆಯದು ಮೂರನೆಯದಕ್ಕಿಂತ ಪರಿಮಾಣದಲ್ಲಿ ಸ್ವಲ್ಪ ಬೆಳೆದಿದೆ. ಹೀಗೆ ಒಂದಕ್ಕಿಂತ ಒಂದು ದೊಡ್ಡದಾಗುತ್ತಾ ಕೊನೆಗೆ ಒಂಭತ್ತನೆ ಭಾಗ ಉಳಿದ ಎಂಟಕ್ಕಿಂತ ದೊಡ್ಡದಾಗಿ ಇದೆ. ಈ ವಿಧವಾಗಿ 12 ಗುಣಗಳು 9 ಭಾಗಗಳಾಗಿ ವಿಭಜನೆಗೊಂಡು ಕ್ರಮವಾಗಿ ಚಿಕ್ಕವು, ದೊಡ್ಡವು ಇವೆ. ಗುಣಚಕ್ರದಲ್ಲಿ ಶತ್ರುಗುಣಗಳು ಆರು ಇದ್ದು, ಆರು ಮಿತ್ರಗುಣಗಳಿವೆ ಅಲ್ಲವೆ! ಒಂದು ಶತ್ರು ಗುಣದ ಪಕ್ಕದಲ್ಲೆ ಅದಕ್ಕೆ ವಿರುದ್ಧವಾದ ಮಿತ್ರಗುಣ, ಅದಕ್ಕೆ ವಿರುದ್ಧ ದಸೆಯಲ್ಲಿ ಸೀಳಿಹೋಗಿದೆ. ಅರಿಷಟ್ ವರ್ಗ ಗುಣಗಳಿಗೆ ವಿರುದ್ಧವಾಗಿ ಮಿತ್ರ ಷಟ್ವರ್ಗ ಗುಣಗಳು ಹೇಗೆ ಸೀಳಿವೆಯೊ ಮುಂದಿನ ಪುಟದಲ್ಲಿ ನೋಡಬಹುದು.




ಶತ್ರುಗುಣಗಳು ಆರು (6) ಒಂದೊಂದು ಒಂಭತ್ತು (9) ಭಾಗಗಳಾಗಿ ಬೇರ್ಪಟ್ಟು ಶತ್ರುಗುಣಗಳು ಎಲ್ಲಾ ಸೇರಿ ಒಟ್ಟು 54 ಆಗಿವೆ. ಹಾಗೆ ಮಿತ್ರ ಗುಣಗಳು ಆರು (6), ಎಲ್ಲಾ ಒಂಭತ್ತು ಭಾಗಗಳಾಗಿ ಬೇರ್ಪಟ್ಟು ಮಿತ್ರ ಗುಣಗಳು ಒಟ್ಟು 54 ಆಗಿವೆ. ಇದರ ಪ್ರಕಾರ ಒಂದು ಭಾಗದಲ್ಲಿ ಸೀಳಿಹೋದ ಒಟ್ಟು ಗುಣಗಳ ಸಂಖ್ಯೆ 108 ಎಂದು ತಿಳಿದುಹೋಗಿದೆ. ಉದಾಹರಣೆಗೆ ಕೋಪ (ಕ್ರೋಧ) ಎಂಬ ಗುಣವನ್ನು ತೆಗೆದುಕೊಂಡು ನೋಡಿದರೆ ಕೋಪ ಚಿಕ್ಕ ಕೋಪದಿಂದ ದೊಡ್ಡ ಕೋಪದವರೆಗು ಒಂಭತ್ತು ಭಾಗಗಳಾಗಿ ಸೀಳಿಹೋಗಿದೆ ಅಲ್ಲವೆ! ಜೀವಿಯು ಕೋಪ ಗುಣದಲ್ಲಿ ಸೇರಿದಾಗ ಹೊರಗೆ ಮನುಷ್ಯ ಕೋಪದಿಂದ ಇರುವಹಾಗೆ ಕಾಣಿಸುವನು. ಒಳಗೆ ಕೋಪದ ದೊಡ್ಡ ಭಾಗವು ಜೀವಿಗೆ ಅಂಟಿಕೊಂಡರೆ ಮನುಷ್ಯ ವಿಪರೀತವಾದ ದೊಡ್ಡ ಕೋಪವನ್ನು ಹೊಂದಿರುವನು. ಮಧ್ಯ ತರಹದ ಕೋಪವನ್ನು ಗುಣಚಕ್ರದಲ್ಲಿ ಅಂಟಿಕೊಂಡರೆ ಒಂದು ವಿಧವಾದ ಹೆಚ್ಚಿನ ಕೋಪಕ್ಕಿಂತ ಸ್ವಲ್ಪ ಕಡಿಮೆ ಕೋಪ ಮನುಷ್ಯನಲ್ಲಿ ಕಾಣಿಸುವುದು. ಒಂಭತ್ತು ಭಾಗಗಳಲ್ಲಿ ಎಲ್ಲದಕ್ಕಿಂತ ಚಿಕ್ಕ ಕೋಪವನ್ನು ಒಳಗೆ ಜೀವಿಗೆ ಅಂಟಿಕೊಂಡರೆ ಹೊರಗೆ ಮನುಷ್ಯನಲ್ಲಿ ಸ್ವಲ್ಪ ಮಾತ್ರ ಕೋಪ ಕಾಣಿಸುವುದು. ದೊಡ್ಡದಾದ ಕೋಪಕ್ಕೆ ಚಿಕ್ಕದಾದ ಕೋಪಕ್ಕೆ ಎಷ್ಟೋ ವ್ಯತ್ಯಾಸ ಹೊರಗೆ ಮನುಷ್ಯನಲ್ಲಿ ಕಾಣಿಸುವುದು. ಇದೇ ವಿಧವಾಗಿ ಮನುಷ್ಯ ಎಲ್ಲ ಗುಣಗಳನ್ನು ಹೆಚ್ಚು ಕಡಿಮೆ ಹೊಂದುವಹಾಗೆ ಪ್ರತ್ಯಕ್ಷವಾಗಿ ಹೊರಗೆ ಕಾಣಿಸುತ್ತದೆ. ಈ ವಿಧದಲ್ಲಿ ಒಂದು ಗುಣ ಭಾಗದಲ್ಲಿನ ಜೀವಾತ್ಮನು 108 ವಿಧಗಳ ಗುಣಗಳನ್ನು

ಹೊಂದುತ್ತಾ ಹೊರಗೆ ಅವುಗಳ ಪ್ರಭಾವಕ್ಕೆ ಒಳಗಾಗುತ್ತಿದ್ದಾನೆ. 108 ವಿಧಗಳ ಗುಣಗಳ ಕಾರ್ಯಗಳು ಪ್ರತ್ಯಕ್ಷ ಸಾಕ್ಷಿಯಾಗಿ ಹೊರಗೆ ಕಾಣಿಸುತ್ತವೆ. ಇವುಗಳನ್ನು ಯಾರೂ ಅಲ್ಲ ಎನ್ನುವುದಿಲ್ಲ.

ಬ್ರಹ್ಮ ಎಂದರೆ ದೊಡ್ಡದು ಎಂದು ಅರ್ಥ, ಏಕ ಸಂಖ್ಯೆಯಲ್ಲಿ ಬ್ರಹ್ಮ ಆಗಿರುವುದು ಒಂಭತ್ತು (9). ಆದ್ದರಿಂದ ಇದನ್ನು ದೇವರ ಸಂಖ್ಯೆ ಎನ್ನುತ್ತಿದ್ದೇವೆ. ಬಹು ಸಂಖ್ಯೆಯಲ್ಲಿ ದೊಡ್ಡದು ಕೋಟಿ. ಕೋಟಿಯನ್ನು ಸಹ ದೇವರ ಸಂಖ್ಯೆಯಾಗಿ ಗುರುತಿಸುವುದು ನಡೆದಿದೆ. ಏಕ ಸಂಖ್ಯೆಯಾದ 9, 12 ಗುಣಗಳನ್ನು ಗುಣಿಸಿ 108 ಮಾಡಿದೆ. ಇನ್ನೂ ಬಹುಸಂಖ್ಯೆಯಲ್ಲಿನ ಕೋಟಿ (1,00,00,000) ಮೊದಲೆ 9 ರಿಂದ ಗುಣಿಸಲ್ಪಟ್ಟು 108 ಭಾಗಗಳಾದ ಗುಣಗಳನ್ನು ಬಹುಸಂಖ್ಯೆ ಯಲ್ಲಿ ದೊಡ್ಡದಾದ (ದೇವರ ಸಂಖ್ಯೆಯಾದ) ಕೋಟಿಯಿಂದ ಗುಣಿಸಿದರೆ ಒಟ್ಟು 108,00,00,000 ಸಂಖ್ಯೆ ಬಂದಿದೆ. 108,00,00,000 ಸಂಖ್ಯೆಯನ್ನು ಕಾಲದಲ್ಲಿ ದೊಡ್ಡದಾದ ಮತ್ತು ಆತ್ಮಗುರುತಾದ ಸಂವತ್ಸರಕ್ಕೆ ಜೋಡಿಸುವುದು ನಡೆದಿದೆ. ಹಾಗೆ ಜೋಡಿಸಿದಾಗ 108 ಕೋಟಿ ಸಂವತ್ಸರಗಳಾಗಿವೆ. ಸಂವತ್ಸರ ಆತ್ಮಕ್ಕೆ ಗುರುತು ಎಂದಿದ್ದೇವಲ್ಲವೆ! ಹೇಗೆ ಹೇಳಿದ್ದೀರೆಂದು ಯಾರಾದರೂ ಕೇಳಿದರೆ ಅವರಿಗೆ ನಾವು ಹೇಳುವುದೇನೆಂದರೆ! ಸಂವತ್ಸರಗಳಿಗೆ ಅರವತ್ತು ಹೆಸರುಗಳಿರುವುದು ಮೊದಲೇ ಹೇಳಿಕೊಂಡಿದ್ದೇವೆ. ಅದರಲ್ಲಿ ಪ್ರತಿ ಹೆಸರು ಆತ್ಮ ಉನ್ನತವನ್ನು, ಆತ್ಮ ವಿಧಾನವನ್ನು ತಿಳಿಸುವುದಾಗಿ ಇವೆ. ಉದಾಹರಣೆಗೆ ಸರ್ವಧಾರಿ ಎನ್ನುವುದು ಸಂವತ್ಸರಗಳ ಕ್ರಮದಲ್ಲಿ 22ನೆಯದು ಆದರೆ ಅದರ ಅರ್ಥವನ್ನು ನೋಡಿದರೆ ಸರ್ವಧಾರಿ ಎಂದರೆ ಸರ್ವ ಶರೀರಗಳನ್ನು ಧರಿಸಿರುವುದು ಎಂದು ಅರ್ಥ ಬರುವುದು. ಸರ್ವವನ್ನು ಧರಿಸಿರುವುದು ಒಂದೇ ಒಂದು ಆತ್ಮ ಮಾತ್ರ. ಆದ್ದರಿಂದ ಆ ಹೆಸರು ಆತ್ಮ ಧರ್ಮವನ್ನು, ವಿಧಾನವನ್ನು ಗುರುತು ಮಾಡುವುದೆಂದು ಹೇಳಬಹುದು. ಹಾಗೆ ಉಳಿದ ಎಲ್ಲ ಹೆಸರುಗಳು ಸಹ ಆತ್ಮ ವಿಧಾನವನ್ನು ಸಾಮರ್ಥ್ಯವನ್ನು, ಧರ್ಮವನ್ನು ತಿಳಿಸುವವುಗಳಾಗಿವೆ.

ಮೊದಲು ಪ್ರಕೃತಿ ಜನಿತ ಗುಣಗಳನ್ನು, ದೈವದ ಗುರುತಾದ ಏಕಸಂಖ್ಯೆಯಾದ ಒಂಭತ್ತು (9) ರಿಂದ ಗುಣಿಸಿದಾಗ 108 ಸಂಖ್ಯೆ ಬಂದಿದೆ. ಆಗ ಬಹುಸಂಖ್ಯೆಯಲ್ಲಿ ದೊಡ್ಡದಾದ ಕೋಟಿ ಸಂಖ್ಯೆಯಿಂದ 108 ಸಂಖ್ಯೆಯನ್ನು ಗುಣಿಸಿದರೆ 108,00,00,000 ಸಂಖ್ಯೆ ಆಗಿದೆ. ಆಗ ಆತ್ಮ ಧರ್ಮವನ್ನು ಸಾಮರ್ಥ್ಯವನ್ನು ತೋರಿಸುವ ಸಂವತ್ಸರದಲ್ಲಿ ಸೇರಿಸಿದರೆ 108 ಕೋಟಿ ಸಂವತ್ಸರಗಳಾಗಿವೆ. ಆತ್ಮ ದೇವರಿಂದ ಸೃಷ್ಠಿಸಲ್ಪಟ್ಟಿದೆ ಆದ್ದರಿಂದ ಆತ್ಮ ಪರಮಾತ್ಮನಿಗೆ (ದೇವರಿಗೆ) ವತ್ಸ ಆಗುತ್ತದೆ. **"ವತ್ಸ"** ಎಂದರೆ ಕುಮಾರ ಎಂದು ಅರ್ಥ. **"ಸಂ"** ಎಂದರೆ ಒಳ್ಳೆಯದು ಎಂದು ಅರ್ಥ. ಸಂವತ್ಸರ ಎಂದರೆ ಕುಮಾರನೆಂದು ಅರ್ಥ. ಒಟ್ಟಿನಲ್ಲಿ ಒಳ್ಳೆಯ ಕುಮಾರನೆಂದು ಅರ್ಥ. ದೇವರ ಸೃಷ್ಠಿಯಲ್ಲಿ ಮೊದಲು ಹುಟ್ಟಿರುವುದು ಸ್ತ್ರೀ ಸ್ವರೂಪವಾದ ಪ್ರಕೃತಿ. ನಂತರ ಪುರುಷಸ್ವರೂಪವಾದ ಆತ್ಮವನ್ನು ಹುಟ್ಟಿಸಿದ್ದಾನೆ. ಪ್ರಕೃತಿ, ಆತ್ಮ ಅಕ್ಕ ತಮ್ಮ ಎಂದು ಅರ್ಥ ಮಾಡಿಕೊಳ್ಳಬೇಕು. ನಂತರ ಪ್ರಕೃತಿ ಪರಮಾತ್ಮರಿಗೆ ಹುಟ್ಟಿದವನು ಜೀವಾತ್ಮ. ಆ ಲೆಕ್ಕದ ಪ್ರಕಾರ ಜೀವಿಗೆ ಪ್ರಕೃತಿ ತಾಯಿಯಾದರೆ, ಆತ್ಮ ಸೋದರ ಮಾವ ಆಗುತ್ತಾನೆ. ದೇವರಿಗೆ ಒಳ್ಳೆಯ ಪುತ್ರನಾಗಿ, ಅಕ್ಷಯನಾಗಿ ಹೆಸರಾಗಿ ರುವವನನ್ನು ಸಂವತ್ಸರ ಎನ್ನುತ್ತಿದ್ದೇವೆ. 108 ಕೋಟಿ ಸಂಖ್ಯೆಯನ್ನು ಸಂವತ್ಸರಗಳಲ್ಲಿ ಸೇರಿಸಿದರೆ 108 ಕೋಟಿ ಸಂವತ್ಸರಗಳಾಗಿವೆ. 108 ಕೋಟಿ ಸಂವತ್ಸರಗಳು ದೇವರ ಹಗಲೆಂದು ಗುರುತಿಸಿದ್ದಾರೆ.

ನಡೆಯುತ್ತಿರುವ ಕಾಲದಲ್ಲಿ ಸರ್ವಶರೀರಗಳನ್ನು ಧರಿಸಿದ ಆತ್ಮ ಆ ಶರೀರದಲ್ಲಿರುವ ಜೀವಾತ್ಮನನ್ನು ಅವನ ಕರ್ಮಾನುಸಾರ ಆಡಿಸಿ ನಡೆಸುತ್ತಿದೆ. ಆತ್ಮ ಶರೀರವನ್ನು ಧರಿಸಿದ್ದು ಆ ಶರೀರದಲ್ಲಿನ ಜೀವಾತ್ಮನನ್ನು ಕರ್ಮ ಪ್ರಕಾರ ಕಷ್ಟ ಸುಖಗಳನ್ನು ಅನುಭವಿಸುವಂತೆ ಮಾಡುತ್ತಿದೆ. ಮಾಯೆ ಗುಣಗಳನ್ನು ಉಪಯೋಗಿಸಿಕೊಂಡು ಕರ್ಮ ಪ್ರಕಾರ ಖಚಿತವಾಗಿ ಜೀವನವನ್ನು ನಡೆಸುತ್ತಿರು ವುದು ಆತ್ಮ. ಆದರೆ ಅದು ಪ್ರಕೃತಿ ಗುಣಗಳನ್ನು ಎಷ್ಟುಕಾಲ ಬಳಸಿಕೊಳ್ಳಬೇಕು, ಎಷ್ಟುಕಾಲ ಜೀವಿಯ ಹಿಂದೆ ಇದ್ದು ನಡೆಸಬೇಕು ಎಂಬ ಪ್ರಶ್ನೆ ಬಂದರೆ

ಅದಕ್ಕೆ ಸಮಾಧಾನ 108 ಕೋಟಿ ಸಂವತ್ಸರಗಳೆಂದು ಹೇಳಬಹುದು. ಮಾಯೆ ರೂಪದಲ್ಲಿ ಗುಣಗಳೂ, ದೇವರ ಪ್ರತಿನಿಧಿಯಾಗಿ ಆತ್ಮ ಶರೀರದಲ್ಲಿ ಕೆಲಸ ಮಾಡುವುದರಿಂದ, ಜೀವಾತ್ಮ, ಮಾಯೆ ಮತ್ತು ಆತ್ಮಗಳ ನಡುವೆ ಸಿಕ್ಕಿಕೊಂಡು ಬದುಕುತ್ತಿದ್ದಾನೆ. ಅವರು ಇಬ್ಬರು ಅಕ್ಕ, ತಮ್ಮ ಅಲ್ಲದೆ ಜೀವಿಗೆ ಮಾತ್ರ ಅಮ್ಮ, ಮಾವ ಆಗುತ್ತಾರೆ. ಮಾಯೆ ಆತ್ಮನ ಹಿಡಿತದಲ್ಲಿ ಜೀವಾತ್ಮ 108 ಕೋಟಿ ಸಂವತ್ಸರಗಳು ಜೀವನ ಸಾಗಿಸಬೇಕು. 108 ಕೋಟಿ ಸಂವತ್ಸರಗಳಲ್ಲಿ ಮನುಷ್ಯ ಎಷ್ಟೋ ಜನ್ಮಗಳು ತೆಗೆದುಕೊಳ್ಳಬೇಕಾಗಿದೆ, ಎಷ್ಟೋ ಶರೀರಗಳು ಧರಿಸಬೇಕಾಗಿದೆ! **ಅಮ್ಮ, ಮಾವರನ್ನು ಬಿಟ್ಟು ತಂದೆಯನ್ನು ನೋಡಬೇಕೆಂದು, ತಂದೆಯ ಹತ್ತಿರಕ್ಕೆ ಹೋಗಬೇಕೆಂದು ಪ್ರಯತ್ನಿಸುವುದೇ ನಿಜವಾದ ದೈವಮಾರ್ಗವಾಗುವುದು.**

ಮನುಷ್ಯ ಹೊರಗಿನ ಪ್ರಪಂಚದ ಧ್ಯಾಸದಲ್ಲಿದ್ದು, ನಾನ್ಯಾರೆಂದಾಗಲಿ, ನಾನು ಶರೀರದಲ್ಲಿ ಎಲ್ಲಿದ್ದೇನೆ? ಎಂದಾಗಲಿ, ತನ್ನನ್ನು ನಡೆಸುವವರು ಯಾರೆಂದಾಗಲಿ ಸ್ವಲ್ಪವೂ ಯೋಚಿಸುವುದಿಲ್ಲ. ಇಲ್ಲಿಯವರೆಗು ನಾವು ಹೇಳಿಕೊಂಡ ಒಳಗಿನ ವಿಧಾನ ಮನುಷ್ಯನಿಗೆ ತಿಳಿಯದೆ ಹೋಗಿದೆ. ಆದ್ದರಿಂದ ತನಗೆ ಮರಣದಲ್ಲಿ ಶರೀರಗಳು ಬದಲಾಗುತ್ತಿವೆಯೆಂದು, ತಾನು ಮಾತ್ರ ಇದೇ ಭೂಮಿಮೇಲೆ ಸೃಷ್ಟ್ಯಾದಿಯಿಂದ ಜೀವನವನ್ನು ಸಾಗಿಸುತ್ತಿದ್ದೇನೆಂದು ತಿಳಿಯದೆ ಹೋಗಿದ್ದಾನೆ. ಅಷ್ಟೇ ಅಲ್ಲದೆ ತಾನು ಶರೀರದಲ್ಲಿ ಗುಣಗಳ ಮಧ್ಯದಲ್ಲಿ ಸಿಕ್ಕಿಕೊಂಡು ಇದ್ದೇನೆಂಬ ವಿಷಯವನ್ನು ತಿಳಿಯದೆ ಇದ್ದಾನೆ. ಹಾಗೆ ತಿಳಿಯದವರೆಗು ಜನ್ಮಗಳಿಂದ ಹೊರಬೀಳಬೇಕೆಂದರೆ ಸಾಧ್ಯವಿಲ್ಲ. ಗುಣ ಚಕ್ರದಲ್ಲಿ ಗುಣಗಳ ಮಧ್ಯದಲ್ಲಿರುವ ಜೀವಾತ್ಮನು ಅವುಗಳ ಬಂಧನದಿಂದ ಹೊರಬೀಳುವುದಕ್ಕೆ ವಿಶೇಷವಾದ ದೈವಜ್ಞಾನ ಬೇಕು. ದೈವಜ್ಞಾನ ತಿಳಿಯದೆ ಹೋದರೆ 108 ಕೋಟಿ ಸಂವತ್ಸರಗಳು ಯಾವುದೊ ಒಂದು ಶರೀರದಲ್ಲಿ ಬದುಕುತ್ತಾ ಜೀವನವನ್ನು ಸಾಗಿಸಬೇಕಾಗಿದೆ. ಪ್ರಪಂಚದ ಆಯಸ್ಸು 108,00,00,000 ಸಂವತ್ಸರಗಳೆಂದು ಅದೇ ಕಾಲ ದೇವರಿಗೆ ಒಂದು ಹಗಲೆಂದು ತಿಳಿದಿದೆ ಅಲ್ಲವೆ! ಸೃಷ್ಟಿ ಪ್ರಾರಂಭವಾಗಿ ಎಷ್ಟು ಕಾಲವಾಗಿದೆಯೆಂದು ಕೇಳಿದರೆ, ಅದಕ್ಕೆ ಸಮಾಧಾನ ಈ ವಿಧವಾಗಿದೆ.

ಇದು ಪ್ರಶ್ನೇ ಆದರೂ ನಮಗದು ಅವಶ್ಯವಿಲ್ಲದ ಪ್ರಶ್ನೆ ಆಗುತ್ತದೆ. ನಮಗೆ ಅವಶ್ಯವಿರುವುದು ನಮ್ಮ ಭವಿಷ್ಯತ್ತು ಮಾತ್ರವೆ. ನಾವು ಕರ್ಮದಿಂದ ಬಿಡುಗಡೆ ಹೊಂದಿ, ದೇವರಲ್ಲಿ ಸೇರಿಹೋಗುವುದಕ್ಕಾಗಿ ಹುಟ್ಟಿದ್ದೇವೆ. ನಡೆಯುತ್ತಿರುವ ಕಾಲವನ್ನು ಉಪಯೊಗಿಸಿಕೊಳ್ಳಬೇಕು, ಆದರೆ ಕಳೆದು ಹೋದ ಕಾಲವನ್ನು ಕುರಿತು ವಿಚಾರಿಸುವುದು ವ್ಯರ್ಥವಾದ ಕೆಲಸವಾಗುವುದು. ಒಂದು ವೇಳೆ ವಿಚಾರಿಸಿದರು ಸರಿಯಾದ ಉತ್ತರ ಸಿಗುವುದಾ ಎಂದು ನೋಡಿದರೆ, ಹಾಗೆ ಸತ್ಯವಾದ ಉತ್ತರ ಸಿಗುವುದೆಂದು ನಂಬಿಕೆ ಇಲ್ಲ. ನಾವು ಸೃಷ್ಟ್ಯಾದಿಯಿಂದ ಇದ್ದೇವೆ. ಆಗಿನಿಂದ ಕಳೆದ ಕಾಲದಲ್ಲಿ ಜೀವಿಸಿದ್ದೇವೆ. ಆದರೆ ಮರಣದ ನಂತರ ಆ ಜೀವನದೊಳಗಿರುವುದೆಲ್ಲಾ ಜ್ಞಾಪಕ ಇಲ್ಲದೆ ಹೋಗುತ್ತಿದೆ. ತಿಳಿಯದೆ ಹೋದರೂ ಕಾಲವನ್ನು ಕುರಿತು ಯಾರೂ ಹೇಳುವುದಕ್ಕಾಗುವುದಿಲ್ಲ. ಒಂದುವೇಳೆ ಯಾರಾದರು ಹೇಳಿದರೂ ಅದು ಸತ್ಯವಾಗುವುದಕ್ಕೆ ಅವಕಾಶ ಕಡಿಮೆ. ಕೆಲವರು ನಡೆದುಹೋದ ಕಾಲವನ್ನು ಕುರಿತು ನಡೆಯುತ್ತಿರುವ ಕಾಲವನ್ನು ಕುರಿತು, ಮುಂಬರುವ ಸೃಷ್ಟಿಕಾಲವನ್ನು ಕುರಿತು ಅಸತ್ಯ ಪ್ರಚಾರ ಮಾಡುವವರಿದ್ದಾರೆ. ಅಂತಹ ಸಮಾಚಾರವು ಶಾಸ್ತ್ರಬದ್ಧವಲ್ಲ. ಆದ್ದರಿಂದ ಅದು ಸತ್ಯಕ್ಕೆ ದೂರ ವಾಗುತ್ತದೆ. ಪ್ರಸ್ತುತ ಪ್ರಚಾರದಲ್ಲಿರುವ ಒಂದನ್ನು ಉದಹರಿಸುತ್ತೇನೆ ನೋಡಿರಿ. ಅದು ಸತ್ಯವೋ ಅಸತ್ಯವೋ ನೀವೇ ಯೋಚಿಸಿ ನಿರ್ಣಯಿಸಿಕೊಳ್ಳಿ.

| | | |
|---|---|---|
| ಕೃತಯುಗ | = 17,28,000 | ಸಂವತ್ಸರಗಳು |
| ತ್ರೇತಾಯುಗ | = 12,96,000 | ” |
| ದ್ವಾಪರಯುಗ | = 8,64,000 | ” |
| ಕಲಿಯುಗ | = 4,32,000 | ” |

**ನಾಲ್ಕು ಯುಗಗಳ ಮೊತ್ತ = 43,20,000 ಸಂವತ್ಸರಗಳು**

ನಾಲ್ಕು ಯುಗಗಳನ್ನು ಸೇರಿಸಿ ಒಂದು ಮಹಾಯುಗ ಎನ್ನುತ್ತಾರೆ, ನಾಲ್ಕು ಮಹಾಯುಗಗಳು 71 ಬಾರಿ ಕಳೆದರೆ ಒಂದು ಮನ್ವಂತರವೆಂದು ಅನ್ನುತ್ತಾರೆ.

43,20,000 X 71 = 30,67,20,000 ಸಂವತ್ಸರಗಳು ಒಂದು ಮನ್ವಂತರ.

ಇಲ್ಲಿಗೆ ಆರು ಮನ್ವಂತರಗಳು ಕಳೆದು ಏಳನೆ ಮನ್ವಂತರದಲ್ಲಿ 27 ಮಹಾಯುಗಗಳು ಮುಗಿದುಹೋಗಿ, 28ನೇ ಮಹಾಯುಗದಲ್ಲಿ ಕಲಿಯುಗ 5145 ನೇ ಸಂವತ್ಸರ ನಡೆಯುತ್ತಿದೆ ಎಂದಿದ್ದಾರೆ. ಅದರ ಪ್ರಕಾರ ಇಲ್ಲಿಗೆ

ಕಳೆದ ಕಾಲ = 196,08,53,145 ಸಂವತ್ಸರಗಳು

ನಡೆಯಬೇಕಾಗಿರುವ ಕಾಲ = 235,91,46,855 ಸಂವತ್ಸರಗಳು

ಸೃಷ್ಠಿ ಇರುವ ಒಟ್ಟು ಕಾಲ = 432,00,00,000 ಸಂವತ್ಸರಗಳು

ಇಲ್ಲಿ ಇತರರು ಹೇಳಿದ್ದನ್ನು ಗಮನಿಸಿದರೆ ನಾಲ್ಕು ಯುಗಗಳ ಕಾಲ ಎಲ್ಲವೂ ಸರಿಹೋಗಿವೆ. ನಾಲ್ಕು ಯುಗಗಳನ್ನು ಒಂದು ಮಹಾಯುಗ ಎಂದು ಅನ್ನುವುದು ಸರಿಹೋಗಿದೆ. 71 ಮಹಾಯುಗಗಳು ಒಂದು ಮನ್ವಂತರ ಎನ್ನುವುದು ಅಶಾಸ್ತ್ರೀಯವಾಗಿದೆ. ಭಗವದ್ಗೀತೆ ಅಕ್ಷರ ಪರಬ್ರಹ್ಮಯೋಗದಲ್ಲಿ 17ನೇ ಶ್ಲೋಕದಲ್ಲಿ ಸಾವಿರ ಯುಗಗಳು ಬ್ರಹ್ಮನಿಗೆ (ದೇವರಿಗೆ) ಒಂದು ಹಗಲು ಎಂದು ಭಗವಂತನು ಹೇಳಿದರೆ, ಇತರರು ನಾಲ್ಕು ಯುಗಗಳನ್ನು ಸೇರಿಸಿ ಒಂದು ಮಹಾಯುಗವೆಂದು ಹೇಳುವುದು, ಅಂತಹ ಮಹಾಯುಗಗಳು ಸಾವಿರ ನಡೆದರೆ ದೇವರಿಗೆ ಒಂದು ಹಗಲೆಂದು ಹೇಳುವುದು ಪೂರ್ತಿ ಅಸತ್ಯವಾದ ಮಾತು. ಅಷ್ಟೇ ಅಲ್ಲದೆ ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ಮಾತಿಗೆ ಪೂರ್ತಿ ವಿರುದ್ಧವಾದ ಮಾತಾಗುತ್ತದೆ. ಆದ್ದರಿಂದ ಮನ್ವಂತರ ಎಂಬ ಮಾತು ಅಶಾಸ್ತ್ರೀಯ ಎಂದು ಹೇಳುತ್ತಿದ್ದೇವೆ. ಭಗವಂತನು ಹೇಳಿದ ಹಾಗೆ ಸೃಷ್ಠಿಯ ಒಟ್ಟುಕಾಲ 108 ಕೋಟಿಸಂವತ್ಸರಗಳಾದರೆ ಅದಕ್ಕೆ ನಾಲ್ಕರಷ್ಟು 432 ಕೋಟಿ ಸಂವತ್ಸರಗಳೆಂದು ಹೇಳಿರುವುದು ವಿಡ್ಡೂರವು. ಈದಿನಕ್ಕೆ 196,08,53,145 ಸಂವತ್ಸರಗಳು ಕಳೆದು ಹೋಗಿವೆಯೆಂದು ಹೇಳುವುದು ಸಹ ವಿಚಿತ್ರವಾಗಿದೆ. ಸೃಷ್ಠಿಕಾಲವು ದೇವರು ಹೇಳಿದ ಪ್ರಕಾರ 108 ಕೋಟಿ ಸಂವತ್ಸರಗಳಾದರೂ, ಇಲ್ಲಿಗೆ 196 ಕೋಟಿ 8

ಲಕ್ಷ 53 ಸಾವಿರ 145 ಸಂ॥ ಮುಗಿದಿವೆ ಎನ್ನುವುದು ಪೂರ್ತಿ ತಪ್ಪಾಗುತ್ತದೆ. ಆದ್ದರಿಂದ ಎಷ್ಟು ನಡೆದಿದೆ ಎನ್ನುವುದರ ಮೇಲೆ ನೆನಪಿಲ್ಲದೆ, ಮುಂಬರುವ ಕಾಲದಲ್ಲಿ ದೇವರ ಜ್ಞಾನದಮೇಲೆ, ದೇವರ ಧರ್ಮದಮೇಲೆ ಧ್ಯಾಸವನ್ನು ಹೊಂದಿರುವುದು ಒಳ್ಳೆಯದು. ಈಗ ಕೆಲವರು ನನ್ನನ್ನೊಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ದೇವರ ಜ್ಞಾನವನ್ನು ಕುರಿತು ದೇವರ ಧರ್ಮವನ್ನು ಕುರಿತು ನೀವು ಹೇಳುವುದು ಒಳ್ಳೆಯದೆ ಅಲ್ಲವೆ! ಹಾಗಲ್ಲದೆ ಕಲಿಯುಗ ಎಂದು ಹೆಸರು ಇಟ್ಟು ನೀವೇಕೆ ಹೇಳುತ್ತಿದ್ದೀರಾ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗಿದೆ.

ನಾವು ದೇವರಿಗೆ ಸಂಬಂಧಿಸಿದ ಜ್ಞಾನವನ್ನು ಹೊರತು ಉಳಿದ ಯಾವುದನ್ನು ಹೇಳುವುದಿಲ್ಲವೆಂದೇ ಹೇಳುತ್ತಿದ್ದೇವೆ. ಈಗ ಹೇಳುವ ಕಲಿಯುಗ ಎನ್ನುವ ಸಮಾಚಾರವೂ ಸಹ ದೇವರಿಗೆ ಸಂಬಂಧಿಸಿದ ಜ್ಞಾನವೇ ಎಂದು ಹೇಳುತ್ತಿದ್ದೇವೆ. ನಾವು ಕಳೆದುಹೋದ ಕಾಲದ ಮೇಲೆ ನೆನಪು ಇಲ್ಲದೆ, ನಡೆಯುತ್ತಿರುವ ಕಾಲದಲ್ಲಿ ದೇವರ ಮೇಲೆ ನೆನಪನ್ನಿಟ್ಟುಕೊಳ್ಳಿ ಎಂದು ಹೇಳಿದ್ದೇವೆ. **ದೇವರೆ ಕಾಲಸ್ವರೂಪನಾಗಿರುವಾಗ ಕಾಲವನ್ನು ಕುರಿತು ತಿಳಿದುಕೊಳ್ಳುವುದು ಮುಖ್ಯವೇ ಆಗುತ್ತದೆ.** ಆದರೇ ಎಷ್ಟು ಕಾಲ ಕಳೆಹೋಗಿದೆ ಎಂಬ ಪ್ರಶ್ನೆ ಅಗತ್ಯವಿಲ್ಲ ಎಂದಿದ್ದೇವೆ. ಈಗ ನಡೆಯುತ್ತಿರುವುದು ಕಲಿಯುಗ ಎಂದು ಎಲ್ಲರಿಗೂ ತಿಳಿದಿದೆ. ಇದಕ್ಕೆ ಒಂದು ಹೆಸರು ಸ್ವಲ್ಪ ಪರಿಮಾಣ ಆಯಸ್ಸು ಇದೆ. ಹೆಸರು ಕಲಿಯುಗ, ಆಯಸ್ಸು 4,32,000 ಸಂವತ್ಸರಗಳು. ಹಾಗೆ ಮೂರು ಉಳಿದ ಯುಗಗಳು ಸಹ ಇವೆ. ಅವುಗಳಿಗೂ ಸಹ ಹೆಸರುಗಳು, ಆಯಸ್ಸು ಇದೆ. ಕೃತ, ತ್ರೇತಾ, ದ್ವಾಪರ, ಕಲಿಯುಗಗಳು ನಾಲ್ಕು, ನಾಲ್ಕು ಯುಗಗಳೇ ಆದರೆ ನಾಲ್ಕು ಸೇರಿ ಒಂದು ಯುಗವಲ್ಲ. ಒಂದು ವೇಳೆ ಒಂದು ಯುಗ ನಾಲ್ಕು ಭಾಗಗಳಾಗಿ ವಿಭಜನೆಯಾಗಿ, ಆ ಭಾಗಗಳಿಗೆ ಹೆಸರು ಇಟ್ಟಿದ್ದರೆ ಎಲ್ಲ ಸಮಾನ ಆಯಸ್ಸಿನಂತೆ ವಿಭಜನೆ ನಡೆದಿರುತ್ತಿತ್ತು. ಒಂದು ರೂಪಾಯಿಯನ್ನು ನಾಲ್ಕು ಭಾಗಗಳಾಗಿ ವಿಭಜಿಸಿದಾಗ ನಾಲ್ಕು ಸಮಾನ ಭಾಗಗಳಾಗಿ ವಿಭಜಿಸಿ ಅವುಗಳಿಗೆ

ನಾಲ್ಕಾಣೆ ಗಳೆಂದು ಹೆಸರು ಇಟ್ಟಿದ್ದೇವೆ. ಒಂದು ರೂಪಾಯಿ ನಾಲ್ಕು ನಾಲ್ಕಾಣಿಯಾಗಿ ಇದ್ದರೂ, ನಾಲ್ಕು ನಾಲ್ಕಾಣೆಗಳು ಸಮಾನವಾಗಿ ಇವೆ. ಹಾಗೆ ಒಂದು ಯುಗವನ್ನು ನಾಲ್ಕು ಭಾಗಗಳಾಗಿ ವಿಭಜಿಸಿದಾಗ ಒಂದೇ ಪರಿಮಾಣದಲ್ಲಿ ಇರಬೇಕು. ಹಾಗೆ ಇಲ್ಲ ಎಂದರೆ ಅವು ಯುಗಗಳಲ್ಲಿನ ಭಾಗಗಳಲ್ಲ, ಅವು ಬೇರೆಬೇರೆ ಯುಗಗಳೆಂದು ತಿಳಿದುಬರುತ್ತದೆ. ಅದೇ ವಿಧವಾಗಿ ನಾಲ್ಕು ಯುಗಗಳು ಬೇರೆಬೇರೆ ಆಯಸ್ಸುಗಳು ಹೊಂದಿ, ಬೇರೆಬೇರೆ ಹೆಸರುಗಳು ಹೊಂದಿರುವು ದರಿಂದ ಅವು ಬೇರೆ ಬೇರೆ ಯುಗಗಳೆಂದು, ಒಂದು ಯುಗದಲ್ಲಿನ ಭಾಗಗಳಲ್ಲವೆಂದು ತಿಳಿಯುತ್ತಿದೆ.

ಆದಿಯಲ್ಲಿ ಮೊದಲು ಬಂದಿರುವ ಕೃತಯುಗ ನಂತರ ಬಂದಿರುವುದು ತ್ರೇತಾಯುಗ, ಆ ನಂತರ ಮೂರನೆಯದು ದ್ವಾಪರಯುಗ, ನಾಲ್ಕನೆಯದು ಕಲಿಯುಗ, ಈ ನಾಲ್ಕು ಯುಗಗಳ ವರಸೆಕ್ರಮ ಮುಗಿದು ಹೋಗುತ್ತಲೇ ತಿರುಗಿ ಮೊದಲನೆಯದಾದ ಕೃತಯುಗ ಪ್ರಾರಂಭವಾಗುತ್ತದೆ. ನಂತರ ಕ್ರಮವಾಗಿ ಕೃತ, ತ್ರೇತಾ, ದ್ವಾಪರ, ಕಲಿಯುಗಗಳು ಬರುವವು. ಹೀಗೆ ನಾಲ್ಕು ಯುಗಗಳು ಒಂದುಭಾರಿ ನಡೆದರೆ ಒಂದು ಗುರುತಾಗಿ ಮಹಾಯುಗ ಎಂದಿದ್ದಾರೆ. ಈ ಮಹಾಯುಗಗಳು 250 ಬಾರಿ ನಡೆದರೆ ಒಟ್ಟು ಸಾವಿರಯುಗಗಳು ನಡೆದಂತಾ ಗುತ್ತದೆ. ಆ ಸಾವಿರ ಯುಗಗಳ ಪರಿಮಾಣವನ್ನು ಪ್ರಪಂಚ ಆಯುಸ್ಸಾಗಿ, ಅದನ್ನೇ ದೇವರ ಹಗಲೆಂದು ಗೀತೆಯಲ್ಲಿ ಹೇಳಲಾಗಿದೆ. ಭಗವದ್ಗೀತೆಯಲ್ಲಿ ಸಾವಿರಯುಗಗಳು ದೇವರಿಗೆ ಒಂದು ಹಗಲೆಂದು ಹೇಳಿದ್ದಾರೆ. ಆದರೆ ಒಂದು ಯುಗ ನಾಲ್ಕು ಭಾಗಗಳೆಂದು ಹೇಳಿಲ್ಲ. ಸಾವಿರ ಯುಗಗಳು 108 ಕೋಟಿ ಸಂವತ್ಸರಗಳಾಗುತ್ತವೆ. ಆದ್ದರಿಂದ 108 ಸಂಖ್ಯೆ ಬಹಳ ಪ್ರಾಮುಖ್ಯವಾದುದು. ಅಷ್ಟು ಪ್ರಾಮುಖ್ಯವಾದ ಸಂಖ್ಯೆ ಎಲ್ಲರಿಗೂ ತಿಳಿಯುವಹಾಗೆ ಯಾರಿಗಾದರೂ ಕಾಣಿಕೆಯನ್ನು ಕೊಡುವಾಗ 108 ರೂಪಾಯಿಗಳಾಗಲಿ, 108 ವಸ್ತುಗಳನ್ನಾಗಲಿ ಕೊಡಬೇಕೆಂದು ಹಿರಿಯರು ನಿರ್ಣಯಿಸಿದ್ದಾರೆ. ಮದುವೆ ಸಮಯದಲ್ಲಿ ಮದುಮಗನಿಗಾಗಲಿ, ಮದುಮಗಳಿಗಾಗಲಿ ಕೊಡುವ ಉಡುಗೊರೆಗಳನ್ನು

108 ಸಂಖ್ಯೆಯಿಂದ ಕೊಡುವುದು ಅಭ್ಯಾಸದಲ್ಲಿದೆ. ಅಷ್ಟೇ ಅಲ್ಲದೆ ಪ್ರಪಂಚ ಆಯುಸ್ಸು ಇದು ಎಂದು ತಿಳಿಯುವಹಾಗೆ ಪ್ರತಿ ಜಪಮಾಲೆಯಲ್ಲಿ 108 ಮಣಿಗಳನ್ನು ಇರುವಹಾಗೆ ಹಿರಿಯರು ನಿರ್ಣಯಿಸಿದ್ದಾರೆ. ನಾವು ಮಾಯೆ ಯಲ್ಲಿಯೆ ಹುಟ್ಟಿ, ಮಾಯೆಯಲ್ಲಿಯೆ ಬದುಕಿ, ಮಾಯೆಯಲ್ಲಿಯೆ ಸತ್ತು ಹೋಗುತ್ತಿದ್ದೇವೆ. ಮಾಯೆಯನ್ನು ವಿಭಜಿಸಿ ನೋಡಿದರೆ 12 ಗುಣಗಳಾಗಿದ್ದು, ಆ ಹನ್ನೆರಡು ಗುಣಗಳು ಒಂದೊಂದು ಒಂಭತ್ತು ಭಾಗಗಳಾಗಿ ವಿಭಜನೆಯಾಗಿ 108 ಗುಣಗಳಾಗಿ ಬದಲಾವಣೆ ಹೊಂದಿವೆ. 108 ಗುಣಗಳಲ್ಲಿಯೇ ಜೀವಾತ್ಮನು ಜೀವಿಸುವಹಾಗೆ, 108 ಕೋಟಿ ಸಂವತ್ಸರಗಳಲ್ಲಿಯೆ ಜೀವಿಯು ಜೀವನವನ್ನು ಸಾಗಿಸುವನು ಎನ್ನುವಂತೆ, ತಲೆಯಲ್ಲಿ ಗುಣರೂಪವಾದ ಮಾಯೆ 108 ಆಗಿ ವಿಭಜನೆಯಾಗಿದೆಯೆಂದು ಮೊದಲೆ ಸ್ವಲ್ಪ ತಿಳಿದುಕೊಂಡಿದ್ದೇವೆ. ಹೀಗೆ ಅನೇಕ ವಿಧಗಳಲ್ಲಿ 108 ಸಂಖ್ಯೆ ದೇವರಿಗೆ ಸಂಬಂಧಿಸಿದ ಜ್ಞಾನದಿಂದ ಜೊತೆಗೂಡಿದೆ. 108 ಸಂಖ್ಯೆಯನ್ನು ಕೂಡಿಸಿದರೆ ಮೊತ್ತವು 9 ಸಂಖ್ಯೆ ಆಗುತ್ತದೆ.

ಮೊತ್ತವು ಸೃಷ್ಠಿಕಾಲ 108 ಕೋಟಿ ಸಂವತ್ಸರಗಳು ಮಾತ್ರವೇ ಎಂದು, 108 ಕ್ಕೆ ನಾಲ್ಕರಷ್ಟು ಹೆಚ್ಚಿಗೆಯಿರುವ 432 ಕೋಟಿ ಸಂವತ್ಸರಗಳಲ್ಲ ಎಂದು ನಾವು ಹೇಳಿದಾಗ! ಕೆಲವರು ಅವರ ಮಾತು ನಡೆಯುವುದಕ್ಕೆ “ಈ ವಿಷಯವು ವೇದಗಳಲ್ಲಿಯೇ ಇದೆ” ಎಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ “ವೇದಗಳು ಸೃಷ್ಠ್ಯಾದಿಯಲ್ಲಿಯೇ ಹುಟ್ಟಿವೆ. ಸೃಷ್ಠಿ ನಡೆದು ಇಲ್ಲಿಗೆ 196 ಕೋಟಿ 8 ಲಕ್ಷಗಳ 53 ಸಾವಿರ 145 ಸಂವತ್ಸರಗಳಾಗುತ್ತಿವೆ” ಎಂದು ಅನ್ನುತ್ತಿದ್ದಾರೆ. ಇವರ ಮಾತು ಸುಳ್ಳು ಎನ್ನುವುದಕ್ಕೆ ಒಂದು ಆಧಾರವಿದೆ. ಅದೇನೆಂದರೆ! ಕಳೆದ ದ್ವಾಪರಯುಗದಲ್ಲಿ ವ್ಯಾಸ ಮಹರ್ಷಿ ಇದ್ದನು. ಆತನು ಅಷ್ಠಾದಶ ಪುರಾಣಗಳನ್ನು, ಚತುರ್ ವೇದಗಳನ್ನು ಬರೆದಿದ್ದಾನೆ. ನಾಲ್ಕು ವೇದಗಳಿಗೆ ಕರ್ತ ವ್ಯಾಸನೇ. ಆದ್ದರಿಂದ ಆತನನ್ನು ವೇದವ್ಯಾಸ ಎನ್ನುತ್ತಾರೆ. ವೇದಗಳನ್ನು ರಚಿಸಿದವನು ವೇದವ್ಯಾಸ ಆಗಿರುವಾಗ, ವೇದಗಳು ದ್ವಾಪರಯುಗದ ಕೊನೆಯಲ್ಲಿ ವ್ಯಾಸನು ಬರೆದಾಗ, ಇಲ್ಲಿಗೆ ಸುಮಾರು ಆರುಸಾವಿರ ಸಂವತ್ಸರಗಳ ಕೆಳಗೆ ಹುಟ್ಟಿವೆ

ಎನ್ನುವುದು ಸತ್ಯವಾಗುತ್ತದೆ. ಹಾಗಲ್ಲದೆ ವೇದಗಳು ಹುಟ್ಟಿ 196 ಕೋಟಿ ಸಂವತ್ಸರಗಳೆನ್ನುವುದು ವಿಚಿತ್ರವಲ್ಲವೆ! ಪೂರ್ತಿ ಅಸತ್ಯವಲ್ಲವೆ? ಮೊದಲು ವೇದಗಳನ್ನು ಬರೆದ ವ್ಯಾಸನು, ಅವು ಸೃಷ್ಠ್ಯಾದಿಯಲ್ಲಿಯೆ ಹುಟ್ಟಿವೆಯೆಂದು ನಂಬಿಸಲು ಕೆಲವು ಕಲ್ಪಿತ ಕಥೆಗಳನ್ನು ಬರೆದು ನಂಬಿಸಿದ್ದಾನೆ. ನಾಲ್ಕು ವೇದಗಳನ್ನು ಬರೆದ ನಂತರ 18 ಪುರಾಣಗಳನ್ನು ಬರೆದಿದ್ದಾನೆ. ಅವೆಲ್ಲವು ಉದರ ಕಥೆಗಳಲ್ಲ ಪುಕ್ಕಟೆ ಪುರಾಣಗಳೆ!. ಅಂದರೆ ವಾಸ್ತವಕ್ಕೆ ದೂರವಾದ ಕಲ್ಪಿತ ಕಥೆಗಳೆ. ಭಾಗವತ ಪುರಾಣಗಳಲ್ಲಿ ಹಿರಣ್ಯಾಕ್ಷನು ಎಂಬ ರಾಕ್ಷಸನಿಂದ ವೇದಗಳನ್ನು ರಕ್ಷಿಸುವುದಕ್ಕೆ ವಿಷ್ಣು ವರಾಹ (ಹಂದಿ) ಅವತಾರವನ್ನು ತಾಳಿದ್ದಾನೆಂದು ಹೇಳಿದ್ದಾರೆ. ಅದು ಸೃಷ್ಠ್ಯಾದಿಯಲ್ಲಿಯೇ ನಡೆದಹಾಗೆ ಹೇಳಿರುವುದರಿಂದ, ಮತ್ತು ವೇದಗಳು ಕೃತಯುಗದಲ್ಲಿಯೇ ಸೃಷ್ಠ್ಯಾದಿಯಲ್ಲಿ ತಯಾರಾಗಿವೆಯೆಂದು, ಅವುಗಳನ್ನು ದೇವರೆ ತಯಾರು ಮಾಡಿದ್ದಾನೆಂದು ಬರೆದಿರುವುದರಿಂದ ಎಲ್ಲರೂ ಅದೇ ನಿಜವೆಂದು ನಂಬಿದ್ದಾರೆ. ವ್ಯಾಸನು ದ್ವಾಪರಯುಗದಲ್ಲಿ ಬರೆದಿದ್ದಾನೆಂದು ಯಾರಿಗೂ ತಿಳಿಯದಂತಾಗಿದೆ.

ಈಗ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! "ಭಗವದ್ಗೀತೆಯನ್ನು ಸೃಷ್ಠ್ಯಾದಿಯಲ್ಲಿಯೇ ದೇವರು ಸೂರ್ಯನಿಗೆ ಹೇಳಿದ್ದಾನೆ, ಸೂರ್ಯನಿಂದ ಭೂಮಿಮೇಲೆ ತಿಳಿದಿದೆಯೆಂದು ಹೇಳಿದ್ದಾರೆ ಅಲ್ಲವೆ! ದೇವರು ಹೇಳಿದ ಭಗವದ್ಗೀತೆಯಲ್ಲಿ ವೇದಗಳು ಗುಣಗಳ ವಿಷಯಗಳೆಂದು, ಮಾಯೆಯೆಂದು ಹೇಳಿದಂತಿದೆ ಅಲ್ಲವೆ! ಹಾಗಿರುವಾಗ ವೇದಗಳ ಪ್ರಸ್ತಾವನೆ ಆದಿಯಲ್ಲಿಯೇ ಗೀತೆಯಲ್ಲಿರುವಾಗ ವೇದಗಳು ಆದಿಯಲ್ಲಿಯೇ ಹುಟ್ಟಿವೆಯೆಂದೆನ್ನುವುದು ಸತ್ಯವೇ ಅಲ್ಲವೆ!" ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗಿದೆ. ದೇವರು ಭಗವದ್ಗೀತೆಯನ್ನು ಆದಿಯಲ್ಲಿಯೆ ಸೂರ್ಯನಿಗೆ ಹೇಳಿದ ಮಾತು ವಾಸ್ತವವೇ. ಆಗ ಗುಣಗಳನ್ನು ಕುರಿತು ಹೇಳಿರುವುದು, ಗುಣಗಳೆ ಮಾಯೆ ಎಂದು ಹೇಳಿರುವುದು ಎಲ್ಲವೂ ವಾಸ್ತವವೇ. ಆದರೆ ವೇದಗಳು ಎಂಬ ಪದವು ಆ ದಿನ ಹೇಳಿರಲಿಲ್ಲ. ದ್ವಾಪರ ಯುಗದ ಅಂತ್ಯದಲ್ಲಿ

ಭಾರತಯುದ್ಧ ನಡೆದಾಗ ಕೃಷ್ಣನು ಅರ್ಜುನನಿಗೆ ಭಗವದ್ಗೀತೆಯನ್ನು ಆದಿಯಲ್ಲಿ ಹೇಳಿದಹಾಗೆ ಹೇಳಿದ್ದಾನೆ. ಅದೆಲ್ಲವೂ ಕೇಳಿದ ಅರ್ಜುನ ಯುದ್ದದ ನಂತರ ಒಂದು ದಿನ ತಾನು ಕೃಷ್ಣನಿಂದ ಕೇಳಿದ್ದನ್ನೆಲ್ಲಾ ವ್ಯಾಸನಿಗೆ ಹೇಳಲಾಗಿದೆ. ಅರ್ಜುನನು ಹೇಳಿದ್ದನ್ನೆಲ್ಲಾ ಕೇಳಿದ ವ್ಯಾಸನಿಗೆ ತಾನು ಮಾಡಿದ ತಪ್ಪೇನೊ ತನಗೆ ಅರಿವಾಯಿತು. ತಾನು ವೇದಗಳನ್ನು ಅವುಗಳಿಗೆ ಅನುಬಂಧವಾಗಿ ಪುರಾಣಗಳನ್ನು ಬರೆದು ಬಹಳ ತಪ್ಪು ಮಾಡಿದ್ದೇನೆಂದು ಅಂದುಕೊಳ್ಳುತ್ತಾನೆ. ತನ್ನ ವೇದಗಳಲ್ಲಿರುವುದು ಗೀತೆಯಲ್ಲಿ ಹೇಳಿದ ಮಾಯೆಯೇ ಹೊರತು ಬೇರೆ ಅಲ್ಲವೆಂದು ಅಂದುಕೊಳ್ಳುತ್ತಾನೆ. ತಾನು ಅಧರ್ಮಗಳನ್ನೇ ಪ್ರಚಾರ ಮಾಡಿದ್ದೇನೆಂದು ವ್ಯಥೆ ಪಟ್ಟು, ಕೊನೆಗೆ ಒಂದು ನಿರ್ಣಯಕ್ಕೆ ಬರುತ್ತಾನೆ. ಭಗವಂತನು ಹೇಳಿದ ಭಗವದ್ಗೀತೆಯನ್ನು ಗ್ರಂಥರೂಪದಲ್ಲಿ ಬರೆಯಬೇ ಕೆಂದುಕೊಳ್ಳುತ್ತಾನೆ. ಹಾಗೆ ಬರೆಯುವುದರಿಂದ ತನ್ನ ಪಾಪಕ್ಕೆ ಸ್ವಲ್ಪ ಕ್ಷಮಾಪಣೆ ಏರ್ಪಡುತ್ತದೆಂದು ಅಂದುಕೊಂಡಿದ್ದಾನೆ. ಹಾಗೆ ಅಂದುಕೊಂಡ ತಕ್ಷಣವೇ ಗೀತೆಯನ್ನು ಪ್ರಾರಂಭಿಸಿ ಪೂರ್ತಿಯಾಗಿ ಬರೆದಿಟ್ಟಿದ್ದಾನೆ. ಆದಿನ ವ್ಯಾಸನು ಬರೆದ ವೇದಗಳನ್ನು ಓದಿದವರಿಗೆ ಅದೇ ವ್ಯಾಸನು ಭಗವದ್ಗೀತೆ ಬರೆದಿರುವುದು ಸರಿಹೋಗಲಿಲ್ಲ. ಭಗವದ್ಗೀತೆಯಲ್ಲಿ ವೇದಗಳಿಗೆ ವಿರುದ್ದವಾಗಿ ಇರುವುದನ್ನು ಗ್ರಹಿಸುತ್ತಾರೆ. ತಮಗೆ, ತಮ್ಮ ವೃತ್ತಿಗೆ ವಿರುದ್ಧವಾಗಿರುವ ಭಗವದ್ಗೀತೆಯಲ್ಲಿ ತಮಗೆ ಅನುಕೂಲವಾದ ಕೆಲವು ಶ್ಲೋಕಗಳನ್ನು ಸೇರಿಸಬೇಕೆಂದು ನಿರ್ಣಯ ಮಾಡಿಕೊಂಡರು. ಅಷ್ಟರಲ್ಲಿಯೇ ವ್ಯಾಸನು ಮರಣ ಹೊಂದಿದ ನಂತರ ಗೀತೆಯೊಳಗೆ ಸಾಧ್ಯವಾದ ಕೆಲವು ಕಡೆ ಕೆಲವು ಶ್ಲೋಕಗಳನ್ನು ಸೇರಿಸಿದ್ದಾರೆ. ಆದರೂ ಭಗವದ್ಗೀತೆ ಪ್ರಜೆ ಗಳೊಳಗೆ ಪೂರ್ತಿಯಾಗಿ ಹೋಗಲಿಲ್ಲ. ಆದಿನ ಕೆಲವು ಪಂಡಿತರು ಮಾತ್ರವೆ ಭಗವದ್ಗೀತೆಯನ್ನು ಓದಿದ್ದಾರೆ. ಆದ್ದರಿಂದ ಆ ಪಂಡಿತರೆ ಭವಿಷ್ಯತ್ತಿನಲ್ಲಿ ತಮಗೆ ಅನುಕೂಲವಾಗಿ ಇರುವಂತೆ ಕಲ್ಪಿತ ಶ್ಲೋಕಗಳನ್ನು ಗೀತೆಯಲ್ಲಿ ಬರೆದಿಟ್ಟಿದ್ದಾರೆ. ಈ ವಿಧವಾಗಿ ಭಗವದ್ಗೀತೆಯಲ್ಲಿ ಸಹ ಕೆಲವು ಅಧರ್ಮಯುಕ್ತವಾದ ಶ್ಲೋಕಗಳು, ದೇವರ ಮಾತಿಗೆ ವಿರುದ್ಧತೆ ಯನ್ನು ತೋರಿಸುವ ಶ್ಲೋಕಗಳು, ಆಲೋಚಿಸು ವವನಿಗೆ ಅನುಮಾನ ವನ್ನು

ಉಂಟಾಗುವಂತೆ ಮಾಡುವ ಶ್ಲೋಕಗಳು ಕೆಲವು ಇವೆ. ಅವುಗಳನ್ನು ಗ್ರಹಿಸಿದ ನಾವು ನಮ್ಮಿಂದಲೇ ರಚಿಸಲ್ಪಟ್ಟ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯಲ್ಲಿ ಆ7 ಶ್ಲೋಕಗಳನ್ನು ತೆಗೆದು ಹಾಕಿ ಬರೆಯಲಾಗಿದೆ. ಇವು ದೇವರು ಹೇಳಿರುವವಲ್ಲ, ಕಲ್ಪಿತ ಶ್ಲೋಕಗಳೆಂದು, ಮಧ್ಯದಲ್ಲಿ ಸೇರಿಸಿರುವವೆಂದು ಸಹ ಹೇಳಲಾಗಿದೆ. **ಇಲ್ಲಿಯವರೆಗು ಯಾವ ಭಗವದ್ಗೀತೆಯಲ್ಲಿ ನಡೆಯದ ಕೆಲಸ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ನಡೆದಿದೆ.**

ನಮ್ಮ ಉದ್ದೇಶ, ನಮ್ಮ ಕರ್ತವ್ಯ, ಸ್ವಚ್ಛವಾದ ದೈವಜ್ಞಾನವನ್ನು ಪ್ರಜೆಗಳಿಗೆ ತಿಳಿಸುವುದೇ. ಆದ್ದರಿಂದ ಭಗವದ್ಗೀತೆಯಲ್ಲಿ "ಅಕ್ಷರ ಪರಬ್ರಹ್ಮ ಯೋಗ" ಎಂಬ ಅಧ್ಯಾಯದಲ್ಲಿ ಕಾಲವನ್ನು ಕುರಿತು ಕೆಲವು ಶ್ಲೋಕಗಳಿವೆ. ಅದರಲ್ಲಿ 17, 18 ಶ್ಲೋಕಗಳಲ್ಲಿ ಯುಗಗಳನ್ನು ಕುರಿತು, ಹಾಗೆಯೇ 24, 25 ಶ್ಲೋಕಗಳಲ್ಲಿ ಹಗಲು, ರಾತ್ರಿ, ಕೃಷ್ಣಪಕ್ಷ, ಶುಕ್ಲ ಪಕ್ಷ, ಉತ್ತರಾಯಣ, ದಕ್ಷಿಣಾಯಣಗಳನ್ನು ಕುರಿತು ಹೇಳಲಾಗಿದೆ. ಈ ಹೆಸರುಗಳೆಲ್ಲವು ಕಾಲಕ್ಕೆ ಸಂಬಂಧಿಸಿದ ಭಾಗಗಳ ಗುರುತುಗಳು. ಕಾಲ ದೈವಸ್ವರೂಪ ಆದ್ದರಿಂದ ಕಾಲಕ್ಕೆ ಸಂಬಂಧಿಸಿದ ಪೂರ್ತಿ ಜ್ಞಾನವನ್ನು ತಿಳಿಸಬೇಕೆಂದುಕೊಂಡಿದ್ದೇವೆ. ಈಗ ಇಲ್ಲಿಯವರೆಗು ಯಾರೂ ಹೇಳದ ಸಂಚಲನವಾದ ವಿಷಯವನ್ನು ತಿಳಿಸುತ್ತೇವೆ ಶ್ರದ್ಧೆಯಿಂದ ಕೇಳಿರಿ. ಕಾಲ ಎಂದರೆ ದೇವರು ಎಂದು ತಿಳಿದುಹೋಗಿದೆ. ಆದರೂ ದೈವಸ್ವರೂಪವಾದ ಕಾಲ ನಮ್ಮ ಎದುರೇ ಇದ್ದರು ಅದು ತಿಳಿದುಬರುವುದಿಲ್ಲ. ಆ ತಿಳಿಯದ ಕಾಲವನ್ನು ತಿಳಿದುಕೊಂಡು ಅದರಲ್ಲಿ ಐಕ್ಯವಾಗಿಹೋಗಿ ನೀನೂ ಸಹ ಕಾಲ ಸ್ವರೂಪನಾಗಿ ಬದಲಾಗಿ ಹೋಗೆಂದು ಹಿರಿಯರು ತಿಳಿಸಿದ್ದಾರೆ. ನೀನು ಸಹ ಕಾಲದೊಳಗೆ ಸೇರಿ ಹೋಗೆಂದು ಕಾಲದ ವಿವರದಲ್ಲಿ ಹೇಳಿದ್ದಾರೆ. ಕಾಲ ದೇವರೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಕಾಲ ದೈವವೆಂದು ಎಲ್ಲರಿಗೂ ಅರ್ಥವಾಗುವುದಕ್ಕೆ ಕಾಲದಲ್ಲಿ ದೊಡ್ಡವಾದ ನಾಲ್ಕು ಯುಗಗಳಿಗೆ ಇರುವ ಹೆಸರುಗಳನ್ನು ದೈವದವೊಂದರ ಹಿರಿಮೆಯನ್ನು ತಿಳಿಸುವ ಹಾಗೆ ಇಟ್ಟಿದ್ದಾರೆ. ಆ ನಾಲ್ಕು ಯುಗಗಳ ಹೆಸರುಗಳು ಇಂದಿಗೂ ನಮ್ಮ ಮುಂದೆ ಇದ್ದರೂ

ಅವುಗಳಲ್ಲಿ ಎರಡು ಹೆಸರುಗಳು ಸ್ವಲ್ಪ ಬದಲಾವಣೆ ಹೊಂದಿವೆ. ನಾಲ್ಕು ಯುಗಗಳ ಹೆಸರುಗಳು ಎಷ್ಟುದೊಡ್ಡವೋ, ಅದರಲ್ಲಿ ಎರಡು ಹೆಸರುಗಳು ಹೇಗೆ ಬದಲಾಗಿ ಕರೆಯಲ್ಪಡುತ್ತಿವೆಯೋ ವಿವರಿಸಿಕೊಳ್ಳೋಣ.

ಇಲ್ಲಿಯವರೆಗು ಬಳಕೆಯಲ್ಲಿರುವವು, ಬಹಳ ಜನಕ್ಕೆ ತಿಳಿದಿರುವವು ಕಾಲದಲ್ಲಿ ದೊಡ್ಡವು ನಾಲ್ಕುಯುಗಗಳು. ಅದರಲ್ಲಿ ಮೊದಲನೆಯದು ಕೃತಯುಗ, ಎರಡನೆಯದು ತ್ರೇತಾಯುಗ, ಮೂರನೆಯದು ದ್ವಾಪರಯುಗ, ನಾಲ್ಕನೆಯದು ಕಲಿಯುಗ. ಒಂದು ವಿಧದಲ್ಲಿ ಹೇಳಿದರೆ ನಾಲ್ಕುಯುಗಗಳ ಹೆಸರುಗಳು ಬೇರೆಬೇರೆಯಾಗಿ ಇದ್ದರೂ ಕೊನೆಯಲ್ಲಿ ಮಾತ್ರ ಯುಗಗಳಾಗಿಯೇ ಕರೆಯಲ್ಪಡುತ್ತಿವೆ. ಕೊನೆಯಲ್ಲಿ ಯುಗಗಳನ್ನು ಬಿಟ್ಟುಹಾಕಿದರೆ ಒಂದು ಕೃತ, ಎರಡು ತ್ರೇತಾ, ಮೂರು ದ್ವಾಪರ, ನಾಲ್ಕು ಕಲಿ ಎಂದು ಹೇಳಬಹುದು. ಈ ನಾಲ್ಕು ಹೆಸರುಗಳಲ್ಲಿ ಕೊನೆಯ ದ್ವಾಪರ, ಕಲಿ ಎಂಬ ಎರಡು ಹೆಸರುಗಳು ಪೂರ್ವದಲ್ಲಿ ಹಿರಿಯರು ಹೇಗೆ ನಿರ್ಣಯಿಸಿದ್ದಾರೋ ಹಾಗೆ ಇವೆ. ಮೊದಲಿರುವ ಕೃತ, ತ್ರೇತಾ ಎಂಬ ಎರಡು ಹೆಸರುಗಳು ಸ್ವಲ್ಪ ಬದಲಾವಣೆ ಹೊಂದಿವೆ. ಮೊದಲ ಹೆಸರಾದ ಕೃತ ಎನ್ನುವ ಹೆಸರು ಪೂರ್ವದಲ್ಲಿ ಕೃತ್ ಎಂಬ ಹೆಸರಿನಲ್ಲಿ ಇತ್ತು. ಕೃತ್ ಎಂದರೆ ಮಾಡಿದವನು ಎಂದು ಅರ್ಥ ಬರುವುದು. ಕೃತ ಎಂದರೆ ಮಾಡಿರುವುದು ಎಂದು ಅರ್ಥಬರುವುದು. ಇಲ್ಲಿ ವಿಶ್ವವನ್ನು ಸೃಷ್ಟಿಸಿದ ದೇವರನ್ನು ಉದ್ದೇಶಿಸಿ ಇಟ್ಟ ಹೆಸರು ಕೃತ್ ಎಂದು ತಿಳಿಯುತ್ತಿದೆ. ಸರ್ವ ಸೃಷ್ಟಿಯನ್ನು ತಯಾರು ಮಾಡಿದವನನ್ನು ಕೃತ್ ಎನ್ನುತ್ತೇವೆ. ಮಾಡಿರುವ ವಿಶ್ವವನ್ನು ಕೃತ ಎನ್ನುತ್ತೇವೆ. ಇಲ್ಲಿ ಇಟ್ಟ ಹೆಸರು ಕಾಲವನ್ನು ಉದ್ದೇಶಿಸಿ ಇಟ್ಟಿರುವುದು, ವಿಶ್ವವನ್ನು ಉದ್ದೇಶಿಸಿ ಇಟ್ಟಿರುವುದಲ್ಲ. ಆದ್ದರಿಂದ ಕೃತ್ ಎಂಬ ಹೆಸರು ವಾಸ್ತವವಾಗಿರುವುದೆಂದು ಅರ್ಥವಾಗುತ್ತಿದೆ. ಈ ವಿಧವಾಗಿ ಕಾಲಕ್ರಮೇಣ ಕೃತ್ ಯುಗ ಸ್ವಲ್ಪ ಕೃತಯುಗವಾಗಿ ಬದಲಾಗಿದೆ. ಅರ್ಥ, ವಿವರ ತಿಳಿಯದವರು ಕುರುಡರಾಗಿ ಕೃತಯುಗ ಎನ್ನುತ್ತಿದ್ದಾರೆ. ಸಾಮಾನ್ಯ ಪ್ರಜೆಗಳೆ ಅಲ್ಲದೆ ಜ್ಯೋತಿಷ್ಯ ಪಂಡಿತರು ಸಹ ಅರ್ಥಹೀನವಾದ ಹೆಸರಿನಿಂದಲೇ ಬರೆಯುತ್ತಿದ್ದಾರೆ. ಈ ವಿಧವಾಗಿ ಮಾಯೆ ಎಲ್ಲರನ್ನು ಮೋಸಮಾಡಿದೆ. ಇದು ಕಾಲಕ್ಕೆ ಇಟ್ಟ ಹೆಸರೆಂದು,

ಕೃತ್ ಯುಗವೇ ಆಗಲಿ ಕೃತಯುಗವಲ್ಲ ಎಂದು ಪಂಡಿತರು ಸಹ ಗ್ರಹಿಸದಂತಿದ್ದಾರೆ.

ಇನ್ನು ಎರಡನೆ ಹೆಸರು ಸಹ ಅರ್ಥಹೀನವಾಗಿ ಹೋಗಿದೆ ಎಂದು ಹೇಳಬಹುದು. ದೇವರು ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16,17 ಶ್ಲೋಕಗಳಲ್ಲಿ ಹೇಳಿದ ಹಾಗೆ ದೇವರು ಮೂರು ಭಾಗಗಳಾಗಿ ಇದ್ದಾನೆ. ಅದನ್ನೇ ಮೂವರು ಪುರುಷರಾಗಿ ಅಲ್ಲಿ ಹೇಳಲಾಗಿದೆ. ಕ್ಷರ ಪುರುಷ, ಅಕ್ಷರ ಪುರುಷ, ಪುರುಷೋತ್ತಮ ಎನ್ನುವ ಮೂವರು ಪುರುಷರಾಗಿ ದೇವರಿದ್ದಾನೆ. ಆ ಮೂವರು ಪುರುಷರನ್ನೇ ಜೀವಾತ್ಮ, ಆತ್ಮ, ಪರಮಾತ್ಮ ಎಂದು, ಮೂರು ಆತ್ಮಗಳೆಂದು ಸಹ ಹೇಳುತ್ತಿದ್ದೇವೆ. ದೇವರು ಹೇಳಿದ ಜ್ಞಾನವನ್ನು ಅನುಸರಿಸಿ ದೇವರ ಹಿರಿಮೆಗೆ ತಕ್ಕಹಾಗೆ ಸೂಚನೆ ಪದಗಳನ್ನು ದೇವರ ಬಗ್ಗೆ ಬಳಸುತ್ತಿದ್ದರು. ಕೃತ್ ಎಂದರೆ ಮಾಡಿದವನೆಂದು ಅರ್ಥ ಕೊಡುವ ಸೂಚನೆ ಪದವಾಗಲಿ ಅದು ಒಂದು ಹೆಸರಲ್ಲ. ವಾಸ್ತವವಾಗಿ ದೇವರಿಗೆ ಹೆಸರುಗಳಿರುವುದಿಲ್ಲ. ಕ್ಷರ, ಅಕ್ಷರ, ಪುರುಷರಿಗಿಂತ ಉತ್ತಮವಾದವನು ಎನ್ನುವ ಸೂಚನೆಯಿಂದ ಪುರುಷೋತ್ತಮ ಎಂದಿದ್ದಾರೆ. ಹಾಗೆ ಜೀವಾತ್ಮ, ಆತ್ಮಗಳಿಗಿಂತ ಬೇರೆಯಾದವನು ಎಂಬ ಅರ್ಥಕೊಡುವ ಪದದಿಂದ ಪರಮಾತ್ಮ ಎಂದಿದ್ದಾರೆ. ಪುರುಷೋತ್ತಮ ಎಂದರೂ, ಪರಮಾತ್ಮ ಎಂದರೂ ಅವು ಅರ್ಥ ಕೊಡುವವೇ ಆಗಲಿ ಹೆಸರುಗಳು ಮಾತ್ರ ಅಲ್ಲ. ಹಾಗೆ ದೇವರು ಎಂದರೇ ಹುಡುಕಬೇಕಾದವನೆಂದು ಅರ್ಥವೇ ಆಗಲಿ ಅದು ಹೆಸರಲ್ಲ. ಹಾಗೆ ಎರಡನೆ ಯುಗದ ಮುಂದೆ ದೇವರ ವಿಧಾನವನ್ನು ತಿಳಿಸುವ ಪದವನ್ನು ಉಪಯೋಗಿಸುತ್ತಾ ತ್ರೈತಾ ಎಂದಿದ್ದಾರೆ. ತ್ರೈತಾ ಎಂದರೆ ಮೂರನೆಯದು. ದೇವರು ಮೂರನೇ ಪುರುಷನು ಅಥವಾ ಮೂರನೆ ಆತ್ಮ ಆಗಿರುವುದರಿಂದ ಕಾಲವನ್ನು ತ್ರೈತಾಯುಗ ಎಂದಿದ್ದಾರೆ. ಆದರೆ ಕಾಲಕ್ರಮೇಣ ಅಜ್ಞಾನ ಬೆಳೆದು ಹೋಗಿ, ತ್ರೈತಾಯುಗ ಸ್ವಲ್ಪ ತ್ರೇತಾಯುಗವಾಗಿ ಬದಲಾಗಿದೆ. ತ್ರೇತಾ ಎಂದರೆ ಅರ್ಥವಿಲ್ಲ. ತ್ರೈತಾ ಎಂದರೆ ಮೂರನೆಯವನು ಎಂದು ಅರ್ಥವಿದೆ. ಈ ದಿನ ಜ್ಯೋತಿಷ್ಯಪಂಡಿತರು, ಸ್ವಾಮೀಜೀಗಳು, ಎಲ್ಲರೂ ತ್ರೇತಾಯುಗವೆಂದೇ ಹೇಳುತ್ತಿದ್ದಾರೆ. ಊರೆಲ್ಲಾ ಉತ್ತರವೆಂದರೇ ನಾವು ಒಬ್ಬರು

ದಕ್ಷಿಣ ಎಂದಹಾಗಿದೆ. ಎಲ್ಲರೂ ತ್ರೇತಾಯುಗ ಎನ್ನುತ್ತಿದ್ದರೆ ನಾವು ಒಬ್ಬರು ತ್ರೇತಾ ಅಲ್ಲ ತ್ರೈತಾ ಎಂದು ಹೇಳಿದರೂ ಬುದ್ಧಿಯಿಲ್ಲದ ಮನುಷ್ಯರು ಕೇಳುವ ಸ್ಥಿತಿಯಲ್ಲಿಲ್ಲ. ಈಗಲಾದರೂ ದೇವರ ದೊಡ್ಡತನಕ್ಕೆ, ವಿಧಾನಕ್ಕೆ ಭಂಗ ಬಾರದಂತೆ, ಅರ್ಥಹೀನವಾಗದೆ ಕೃತಯುಗವನ್ನು ಬಿಟ್ಟು ಕೃತ್ ಯುಗವೆಂದು, ಹಾಗೆ ತ್ರೇತಾಯುಗವನ್ನು ತ್ರೈತಾಯುಗವೆಂದು ಕರೆಯಬೇಕೆಂದು ತಿಳಿಸುತ್ತಿದ್ದೇವೆ. ಕೃತ್ ಎಂಬ ಶಬ್ದವಾಗಲಿ, ತ್ರೈತಾ ಎಂಬ ಶಬ್ದವಾಗಲಿ ಕಾಲಕ್ಕೆ ಪೂರ್ತಿಯಾಗಿ ಸರಿಹೋಗುತ್ತದೆಂದು ತಿಳಿಯಬೇಕು. ಕಾಲಕ್ರಮೇಣ ಅಜ್ಞಾನ ಬೆಳೆದು ಹೋಗಿ ಕೆಲವು ವಿಷಯಗಳು ತಿಳಿಯದೆ ಹೋದರೂ, ಅವುಗಳನ್ನು ಕುರಿತು ವಿವರವಾಗಿ ತಿಳಿಸುವವರು ಬಂದು ತಿಳಿಸಿದಾಗ, ಅದರಲ್ಲಿನ ಸಾರಾಂಶವನ್ನು ಗ್ರಹಿಸಿ, ಯಾವುದು ಸತ್ಯವೊ ಆಲೋಚಿಸಿ ಅದರ ಪ್ರಕಾರ ನಡೆದುಕೊಳ್ಳುವುದು ವಿಜ್ಞರ (ಜಾಣರ) ಲಕ್ಷಣ.

ಮೂರನೆಯದು ದ್ವಾಪರ ಎಂದು ಇದೆ. ಇದಕ್ಕಿಂತ ಮೊದಲೆ ದೇವರನ್ನು ಪರಮಾತ್ಮ ಎನ್ನುತ್ತಾರೆಂದು ಹೇಳಿಕೊಂಡಿದ್ದೇವೆ. ಆತ್ಮಕ್ಕಿಂತ ಬೇರೆಯಾಗಿ ಇರುವವನು ಆದ್ದರಿಂದ ಪರಮಾತ್ಮ ಎನ್ನುತ್ತೇವೆ. ಜೀವಾತ್ಮ ಆತ್ಮ ಅಲ್ಲದವನು ಪರಮಾತ್ಮ. ಹಾಗೆ ಕ್ಷರ ಪುರುಷ, ಅಕ್ಷರಪುರುಷ ಅಲ್ಲದವನು ಪುರುಷೋತ್ತಮನು. ಮೂರು ಆತ್ಮಗಳಲ್ಲಿ ಮೂರನೇ ಆತ್ಮ ಆದ ಅದನ್ನು ತ್ರೈತಾತ್ಮ ಎನ್ನುತ್ತೇವೆ. ಹಾಗೆ ಮೂರರಲ್ಲಿ ಎರಡೂ ಅಲ್ಲದ್ದು ದೇವರು ಎನ್ನುವುದಕ್ಕೆ ದ್ವಾಪರ ಎಂದು ಎನ್ನುತ್ತೇವೆ. ದ್ವಾ ಎಂದರೆ ಎರಡು ಎಂದು, ಪರ ಎಂದರೆ ಬೇರೆಯಾಗಿರುವುದು ಎಂದು ಅರ್ಥ. ದ್ವಾಪರ ಎಂದರೆ ಎರಡಕ್ಕಿಂತ ಬೇರೆಯಾಗಿರುವದೆಂದು ಅರ್ಥ. ದೇವರ ಹಿರಿಮೆಗೆ ತಕ್ಕಹಾಗೆ ಇರುವ ಶಬ್ದವು ದ್ವಾಪರ. ಆದ್ದರಿಂದ ಪೂರ್ವವು ಹಿರಿಯರು ಕಾಲಕ್ಕೆ ದ್ವಾಪರ ಎಂದು ಸೂಚನೆಗಾಗಿ ಕರೆದಿದ್ದಾರೆ. ಅದನ್ನೇ ದ್ವಾಪರಯುಗ ಎಂದು ಅನ್ನುತ್ತೇವೆ. ಇದು ಪೂರ್ವದ ಹಿರಿಯರು ನಿರ್ಣಯಿಸಿದ ಪದ. ಅದೃಷ್ಟವಶಾತ್ ಈ ಪದ, ಅದರ ಅರ್ಥ ಬದಲಾಗದೆ ಹಾಗೇ ಇದೆ. ಇದು ದೇವರ ಗುರುತೆಂದು ನಾವು ಹೇಳುವುದಕ್ಕೆ ಸಾಕ್ಷಿಯಾಗಿ ನಿಂತಿದೆ. ಇನ್ನು ನಾಲ್ಕನೆಯದು ಕಲಿಯುಗ. ಇದು ಸಹ ಪೂರ್ವದಲ್ಲಿ ಹಿರಿಯರು

ನಿರ್ಣಯಿಸಿದ ಹಾಗೆ ಅರ್ಥ ಕೆಡದ ಹಾಗೆ ಇದೆ. ಭಗವದ್ಗೀತೆಯಲ್ಲಿ ನೀನು ಯಾರು ಎಂದು ಅರ್ಜುನನು ದೇವರನ್ನು ಕೇಳಿದಾಗ ಅದಕ್ಕೆ ಉತ್ತರವಾಗಿ "ಕಾಲೋಸ್ಮಿ ಲೋಕಕ್ಷಯ" ಎಂದು ಹೇಳುವುದು ನಡೆದಿದೆ. ಅದರ ಅರ್ಥ "ಲೋಕವನ್ನು ನಾಶ ಮಾಡುವ ಕಾಲ" ಎಂದು ಅರ್ಥ. ಇದರ ಪ್ರಕಾರ ಕಾಲ ಸರ್ವರನ್ನು ನಾಶ ಮಾಡುತ್ತಿದೆಯೆಂದು ಅರ್ಥವಾಗುತ್ತಿದೆ. ದೇವರು ಎಲ್ಲರನ್ನು, ಎಲ್ಲವನ್ನು ಸೃಷ್ಠಿಸುವ ಸೃಷ್ಠಿಕರ್ತನೇ ಅಲ್ಲದೆ, ತಾನು ಸೃಷ್ಠಿಸಿರುವ ಎಲ್ಲರನ್ನು, ಎಲ್ಲವನ್ನು ನಾಶ ಮಾಡಬಲ್ಲನು. ಆದ್ದರಿಂದ ತನ್ನನ್ನು ಲೋಕಕ್ಷಯನೆಂದು ಹೇಳಿದ್ದಾನೆ. ಕ್ಷಯ ಎಂದರೆ ನಾಶ. ದೇವರನ್ನು ಆತನ ಹಿರಿಮೆಗೆ ತಕ್ಕಹಾಗೆ ಕರೆಯುವುದು ಧರ್ಮವಾಗುತ್ತದೆ. ಆದ್ದರಿಂದ ಅದೇ ಉದ್ದೇಶದಿಂದಲೇ ಕಾಲಕ್ಕೆ ಕಲಿಯುಗ ಎಂದು ಸೂಚಿಸಿದ್ದಾರೆ. ಕಲಿ ಎಂದರೆ ನಾಶವನ್ನು ಉಂಟುಮಾಡುವ ಯುದ್ಧ ಎಂದು ಅರ್ಥ. ಯುದ್ಧ ಎಂದರೆ ನಾಶ ಎಂದರ್ಥ, ಆದ್ದರಿಂದ ದೇವರನ್ನು ಕಲಿಪುರುಷ ಎಂದಿದ್ದಾರೆ. ಅದೇ ಉದ್ದೇಶದಿಂದ ಕಾಲವನ್ನು ಕಲಿಯುಗ ಎಂದು ಹೇಳಿದ್ದಾರೆ. ಪೂರ್ವದ ಕೆಲವರು ಜ್ಞಾನಿಗಳು ಒಂದು ಜಾಗದಲ್ಲಿ ಕುಳಿತುಕೊಂಡು ಕಾಲಕ್ಕೆ ಹೆಸರಲ್ಲದ ಪದಗಳನ್ನು ನಿರ್ಣಯಿಸಿದ್ದಾರೆ. ಆ ಪದಗಳು ದೇವರ ಧರ್ಮಗಳಿಗೆ ತಕ್ಕಹಾಗೆ ಏರ್ಪಡಿಸಿದ್ದಾರೆ. ಅವರು ಸಕ್ರಮವಾಗಿ ಏರ್ಪಡಿಸಿರುವವು 1) ಕೃತ್‌ಯುಗ 2) ತ್ರೈತಾಯುಗ 3) ದ್ವಾಪರಯುಗ 4) ಕಲಿಯುಗ. ಆದರೆ ಮೊದಲಿರುವ ಎರಡು ದೊಡ್ಡ ಹೆಸರುಗಳು ಸ್ವಲ್ಪ ಬದಲಾಗಿ ಕೃತ್‌ಯುಗ ಕೃತಯುಗವಾಗಿ, ತ್ರೈತಾಯುಗ ತ್ರೇತಾಯುಗವಾಗಿ ಉಳಿದಿವೆ.

ಯುಗಗಳ ಹೆಸರುಗಳ ವಿಷಯದಲ್ಲಿ ಈಗ ಸಂಚಲನೆವಾರ್ತೆ ತಿಳಿದಂತಾಗಿದೆ. ಈಗ ಹೇಳಿದ ಸತ್ಯವನ್ನು ಕೆಲವರು ಚೆನ್ನಾಗಿ ಅರ್ಥ ಮಾಡಿಕೊಂಡರು, ಕೆಲವರು ಮಾತ್ರ ಜೀರ್ಣಿಸಿಕೊಳ್ಳದೆ ಹೋಗಬಹುದು. ಅಂತಹವರು ಈಗ ಹೇಳುವ ಮತ್ತೊಂದು ವಿಷಯವನ್ನು ನೋಡಿದರೆ ಪೂರ್ತಿಯಾಗಿ ವಾಂತಿ ಮಾಡಿಕೊಳ್ಳುತ್ತಾರೇನೋ ಎನಿಸುತ್ತಿದೆ. ಸತ್ಯಾನ್ವೇಷಿಗಳಿಗೆ

ನಾವು ಹೇಳುವ ಸತ್ಯಗಳು ಒಳ್ಳೆಯ ಆಹಾರವಾಗಿ ಇರುವಾಗ, ಅನ್ವೇಷಣೆ ಇಲ್ಲದವರಿಗೆ ನಾವು ಹೇಳುವ ವಿಷಯಗಳು ಜೀರ್ಣವಾಗುವುದಿಲ್ಲ. ನಮ್ಮ ಆಧ್ಯಾತ್ಮಿಕ ಗ್ರಂಥಗಳಲ್ಲಿನ ಆಧ್ಯಾತ್ಮಿಕ ವಿದ್ಯೆ ಎಲ್ಲವು ಜೀವಿಯು ದೇವರಲ್ಲಿ ಐಕ್ಯವಾಗುವ ವಿಧಾನವನ್ನೇ ತೋರಿಸಿವೆ. ಹಾಗೆ ಐಕ್ಯವಾಗುವುದನ್ನೇ ಮುಕ್ತಿ ಹೊಂದುವುದು ಅಥವಾ ಮೋಕ್ಷ ಹೊಂದುವುದು ಎನ್ನುತ್ತಾರೆ. ದೇವರ ಸಮಾಚಾರವು, ಜ್ಞಾನ ಧರ್ಮಗಳು ಎಲ್ಲಿರುತ್ತವೋ ಅಲ್ಲಿ ಎಲ್ಲ ಜೀವ ಬ್ರಹ್ಮಐಕ್ಯ ವಿಧಾನವೇ ಇರುತ್ತದೆ. ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಮುಖ್ಯ ಗ್ರಂಥವಾದ ಭಗವದ್ಗೀತೆ ಯಲ್ಲಿ ದೇವರಲ್ಲಿ ಐಕ್ಯವಾಗುವ ವಿಧಾನಗಳನ್ನೇ ಮುಖ್ಯವಾಗಿ ಹೇಳಿದ್ದಾರೆ. ದೇವರನ್ನು ಸೇರುವ ವಿಧಾನವನ್ನೇ ಯೋಗ ಎಂದು ಗೀತೆಯಲ್ಲಿ ಹೇಳಿದ್ದಾರೆ. ಅಂತಹ ಯೋಗಗಳು ಧರ್ಮಗಳ ಪ್ರಕಾರ ಹೇಳಿರುವವು ಎರಡೇ ಎರಡು ಇವೆ. ಅದರಲ್ಲಿ ಒಂದು ಬ್ರಹ್ಮಯೋಗ, ಎರಡನೆಯದು ಕರ್ಮಯೋಗ. ಧರ್ಮಗಳಿಗೆ ಅತೀತವಾದ ಯೋಗ ಸಹ ಒಂದು ಇದೆ. ಅದನ್ನು ಭಕ್ತಿಯೋಗ ಎನ್ನುತ್ತೇವೆ. ಭಕ್ತಿಯೋಗ ಬಹಳ ದೊಡ್ಡದು, ಅದು ಎಲ್ಲರಿಗೂ ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲ. ಧರ್ಮಗಳಿಂದ ಕೂಡಿಕೊಂಡಿರುವ ಬ್ರಹ್ಮ, ಕರ್ಮ ಯೋಗಗಳನ್ನು ಮನುಷ್ಯ ಅರ್ಥ ಮಾಡಿಕೊಂಡರೆ ನಂತರ ಭಕ್ತಿಯೋಗ ಅರ್ಥವಾಗುತ್ತದೆ. ಭಗವದ್ಗೀತೆಯಲ್ಲಿ ದೇವರ ವಿಧಾನವೆಲ್ಲ ಸಂಪೂರ್ಣವಾಗಿ ಇದೆ. ಅಲ್ಲೇ ಯೋಗಗಳ ವಿವರವೆಲ್ಲವೂ ಸಂಪೂರ್ಣವಾಗಿ ಇದೆ. ಈ ವಿಷಯವೆಲ್ಲಾ ಏಕೆ ಹೇಳುತ್ತಿದ್ದೇನೆಂದರೆ! ದೈವ ಸ್ವರೂಪ ಎಲ್ಲಾದರೆ ಇದೆಯೋ ಅದರೊಳಗೆ ಐಕ್ಯವಾಗಿ ಹೋಗುವ ವಿಧಾನ ಸಹ ಇರುವುದೆಂದು ಅರ್ಥ ವಾಗುವುದಕ್ಕೆ ಹೇಳಬೇಕಾಗಿ ಬಂದಿದೆ.

ಯೋಗ ಎಂದರೆ ಸೇರುವುದು ಎಂದು ಅರ್ಥ. ವಿಯೋಗ ಎಂದರೆ ಬೇರೆತಿರುವುದು ಬಿಟ್ಟಹೋಗುವುದೆಂದು ಎಂದು ಅರ್ಥ. ಯೋಗ ಎಂಬ ಮಾತು ದೈವತ್ವವಿರುವ ಜಾಗದಲ್ಲಿಯೇ ಹೇಳಲಾಗುತ್ತದೆಂದು ಹೇಳಿದ್ದೇವೆ ಅಲ್ಲವೆ! ಕಾಲ ದೈವಸ್ವರೂಪ ಎಂದಿದ್ದೇವೆ. ಹಾಗೆ ಕಾಲಕ್ಕೆ ದೈವವನ್ನು ಸೂಚಿಸುವ

ಕೃತ್ ಎಂದು, ತ್ರೈತಾ ಎಂದು, ದ್ವಾಪರ ಎಂದು, ಕಲಿ ಎಂಬ ಶಬ್ದಗಳಿಂದ ಕರೆಯುತ್ತಿದ್ದೇವೆ. ಅಂತಹ ದೈವಸ್ವರೂಪವಾದ ಕಾಲಗಳ ಪಕ್ಕದಲ್ಲಿ ಯೋಗ ಎಂಬ ಶಬ್ದವನ್ನು ಹಿರಿಯರು ಜೊತೆ ಮಾಡಿಟ್ಟಿದ್ದಾರೆ. ಇಲ್ಲಿಯವರೆಗು ನಾವು ಕರೆಯುತ್ತಿರುವ ಯುಗಗಳು ಪೂರ್ವದಲ್ಲಿ ಯೋಗಗಳಾಗಿ ಇಟ್ಟಿರುವ ಹೆಸರುಗಳು. ವಾಸ್ತವಕ್ಕೆ ಕೃತ್‌ಯೋಗ, ತ್ರೈತಾಯೋಗ, ದ್ವಾಪರಯೋಗ, ಕಲಿಯೋಗ ಎನ್ನುವ ಹೆಸರುಗಳು ಸತ್ಯವಾಗಿರುವವು. ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತ ವೆಂದು ದೇವರು ಗೀತೆಯಲ್ಲಿ ಹೇಳಿದ ಹಾಗೆ ಧರ್ಮಗಳಾದ ಯೋಗಗಳ ಹೆಸರುಗಳೆ ಕೊನೆಯಲ್ಲಿ ಯುಗಗಳಾಗಿ ಕರೆಯಲ್ಪಟ್ಟಿವೆ. ಯೋಗ ಎಂದರೆ ದೇವರಲ್ಲಿ ಐಕ್ಯವಾಗಿ ಹೋಗು ಎಂದು ಅರ್ಥವಿದ್ದರೆ, ಯುಗ ಎಂದರೆ ಯಾವ ಅರ್ಥವಿಲ್ಲವೆಂದು ಹೇಳಬಹುದು. ಕೃತ್, ತ್ರೈತಾ, ದ್ವಾಪರ, ಕಲಿ ಎನ್ನುವ ದೈವದ ಸ್ಥಿತಿಯನ್ನು ತಿಳಿಸುವ ಪದಗಳ ಪಕ್ಕದಲ್ಲಿ ಯೋಗವಿದ್ದರೆ ಅಂದ, ಅರ್ಥ ಸರಿಹೋಗುವುದು. ಹಾಗಲ್ಲದೆ ಅಷ್ಟು ದೊಡ್ಡ ಪದಗಳ ಪಕ್ಕದಲ್ಲಿ ಅರ್ಥವಿಲ್ಲದ ಚಿಕ್ಕ ಪದಗಳನ್ನು ಇಡುವುದು ಒಳ್ಳೆಯದಲ್ಲ. ಹಾಗೆ ಅರ್ಥವಿಲ್ಲದ ಪದಗಳನ್ನು ಇಡುವುದು ಇಂದ್ರನ ಪಕ್ಕದಲ್ಲಿ ಒಣಗಿಹೋದ ಮೂಳೆಯನ್ನು ಕಡಿಯುತ್ತಿರುವ ನಾಯಿಯನ್ನು ಇಟ್ಟಹಾಗೆ ಇರುತ್ತದೆ. ಕುಬೇರನ ಪಕ್ಕದಲ್ಲಿ ಗಂಜಿ ಸಹ ಇಲ್ಲದ ಬಿಕಾರಿಯನ್ನು ಇಟ್ಟಹಾಗಿರುತ್ತದೆ. ಆದ್ದರಿಂದ ನಾವು ಹೇಳುವ ಸತ್ಯವನ್ನು ತಿಳಿದುಕೊಂಡು ಯುಗವನ್ನು ಯೋಗ ಎಂದು ಕರೆಯುತ್ತಾ ಸತ್ಯ ಹೊರಬರುವ ಹಾಗೆ ಮಾಡುತ್ತೀರೆಂದು ಅಂದುಕೊಳ್ಳುತ್ತೇನೆ. ಇಲ್ಲಿಗೆ ಕಾಲಗಳ ಹೆಸರುಗಳಲ್ಲಿನ ತಿರುಕಾಸುಗಳೆಲ್ಲ ಪೂರ್ತಿಯಾಗಿ ತಿಳಿದು ಹೋಗಿವೆ ಎಂದು ಅಂದುಕೊಳ್ಳುತ್ತೇನೆ.

ಭೂಮಿಮೇಲೆ ಎಷ್ಟೋ ಮತಗಳಿವೆ. ಎಲ್ಲವುಗಳಿಗಿಂತ ಎರಡೇ ಎರಡು ಮತಗಳು ಬಹಳ ದೊಡ್ಡವು. ಕ್ರೈಸ್ತವ ಮತ, ಇಸ್ಲಾಮ್ ಮತಗಳು ಎರಡು ದೊಡ್ಡ ಮತಗಳೇ. ಆ ಎರಡು ಮತಗಳಿಗಿಂತ ಹಿಂದೂಮತ ಚಿಕ್ಕದೆಂದೇ ಹೇಳಬಹುದು. ಒಂದು ಕಾಲದಲ್ಲಿ ಇಂದೂ (ಹಿಂದೂ) ಮತ ಪ್ರಪಂಚ

ವ್ಯಾಪ್ತವಾಗಿರುವ ಏಕೈಕ ಮತವಾಗಿ ಇತ್ತು. ನಂತರ ಎಷ್ಟೋ ಮತಗಳು ಹುಟ್ಟಿಬಂದಿರುವುದರಿಂದ ಇಂದೂಗಳು ತಮ್ಮ ಇಂದೂತ್ವವೆನ್ನುವ ದೈವಜ್ಞಾನವನ್ನು ತಿಳಿಯದೆ ಹೋಗಿರುವುದರಿಂದ, ಕೊನೆಗೆ ಹಿಂದೆ ಹುಟ್ಟಿರುವ ಮತಗಳಿಗಿಂತ ಚಿಕ್ಕ ಮತವಾಗಿ ಈದಿನ ಹಿಂದೂ ಮತವಿದೆ. ಎರಡು ಸಾವಿರ ಸಂವತ್ಸರಗಳ ಪೂರ್ವದಲ್ಲಿ ಕ್ರೈಸ್ತವಮತ ಹುಟ್ಟಿದರೆ, ಹದಿನಾಲ್ಕು ನೂರು ಸಂವತ್ಸರಗಳ ಪೂರ್ವದಲ್ಲಿ ಇಸ್ಲಾಮ್ ಮತ ಹುಟ್ಟಿದೆ. ಇಂದೂ (ಹಿಂದೂ) ಮತಕ್ಕಿಂತ ಎಷ್ಟೋ ನಂತರ ಹುಟ್ಟಿದ ಕ್ರೈಸ್ತ, ಇಸ್ಲಾಮ್ ಮತಗಳು ಎರಡೂ ದೊಡ್ಡವಾಗಿ ಹೋಗಿವೆ. ಸೃಷ್ಟ್ಯಾದಿಯಿಂದ ಇರುವ ಇಂದೂ ಪಥವು ಕೊನೆಗೆ ಅಜ್ಞಾನವಶವಾಗಿ ಹಿಂದೂಮತವಾಗಿ ಬದಲಾಗಿ ಇತರೆ ಮತಗಳಿಗಿಂತ ಚಿಕ್ಕದಾಗಿಹೋಗಿದೆ. **ಒಂದು ಕಾಲದಲ್ಲಿ ಪ್ರಪಂಚ ವ್ಯಾಪ್ತವಾಗಿರುವ ಇಂದೂತ್ವದಿಂದ ಎಷ್ಟೋ ಮತಗಳು ಹುಟ್ಟಿಬಂದಿವೆ. ಯಾವ ಮತಕ್ಕಾದರೂ ಹುಟ್ಟಿದಮನೆ ಇಂದೂ ಪಥವೇ.** ಆದ್ದರಿಂದ ಇಂದೂತ್ವದಲ್ಲಿ ಹಿರಿಯರು ಹೇಳಿದ ಸ್ವರ್ಗ, ನರಕಗಳು ಎಲ್ಲ ಮತಗಳಲ್ಲಿಯೂ ತಿಳಿದುಬರುತ್ತವೆ. ಹಾಗೆ ಎಲ್ಲ ಮತದವರಿಗೆ, ಎಲ್ಲ ದೇಶದವರಿಗು ಭಾನುವಾರ ಇದೆ ಮತ್ತು ಅದು ರಜಾ ದಿನವಾಗಿ ಇದೆ. ಅಷ್ಟೇ ಅಲ್ಲದೆ ಇಂದೂತ್ವ ಎನ್ನುವ ಆಧ್ಯಾತ್ಮಿಕತೆ ಎಲ್ಲ ಮತಗಳಲ್ಲಿಯೂ ಇದೆ. ಅವರು ಸಹ ಪ್ರಳಯ ಪ್ರಭವಗಳನ್ನು ಕುರಿತು ಹೇಳಿಕೊಳ್ಳುತ್ತಿದ್ದಾರೆ. ಎಲ್ಲರನ್ನು ಸೃಷ್ಟಿಸಿದ ಸೃಷ್ಟಿಕರ್ತ ಒಬ್ಬನಿದ್ದಾನೆಂದು, ಒಂದು ದಿನ ಪ್ರಳಯ ಬರುತ್ತದೆಂದು, ಎಲ್ಲರೂ ಆ ದಿನ ಸತ್ತುಹೋಗುತ್ತೇವೆಂದು ಹೇಳಿಕೊಳ್ಳುತ್ತಿದ್ದಾರೆ. ಎಲ್ಲ ಮತದವರಿಗೆ ನಡೆಯುತ್ತಿರುವ ಪ್ರಳಯದ ಮೇಲೆ ಸ್ವಲ್ಪ ಅವಗಾಹನೆ ಇದೆಯೆಂದೇ ಹೇಳಬಹುದು. ಕೆಲವರಾದರೆ ಪ್ರಳಯ ದಿನದಂದು ಸ್ವರ್ಗನರಕಗಳ ನಿರ್ಣಯ ಇರುತ್ತದೆಂದು ಹೇಳುತ್ತಿದ್ದಾರೆ. ಹೇಗಾದರೇನು ಎಲ್ಲ ಮತಗಳಲ್ಲಿಯು ಪ್ರಳಯ ಎನ್ನುವುದು ಒಂದಿದೆ. ಅದು ಮುಂಬರುವ ಕಾಲದಲ್ಲಿ ಬರುತ್ತದೆಂದು ಹೇಳುವುದು ನಡೆಯುತ್ತಿದೆ. ಪ್ರಳಯವನ್ನು ಕುರಿತು ಗತದಲ್ಲಿ ಕೆಲವರು ಹೇಳಿಕೊಂಡ ವಿಷಯವನ್ನು ವಿವರಿಸಿಕೊಳ್ಳೋಣ.

ಕ್ರೀ.ಶ. 1994ನೇ ಸಂವತ್ಸರ ದೆಹಲಿಯಲ್ಲಿ ಗನ್‌ಲೈಸೆನ್ಸ್ ತೆಗೆದುಕೊಂಡು ರೈಲಿನಲ್ಲಿ ಬಂದು ಸಿಕಿಂದ್ರಾಬಾದ್ ಸ್ಟೇಷನ್‌ನಲ್ಲಿ ಇಳಿದಿದ್ದೇನೆ. ಆಗ ರಾತ್ರಿ 9 ಗಂಟೆಯ ಸಮಯವಾಗಿದ್ದರಿಂದ ನನಗೆ ಪರಿಚಯವಿದ್ದ ರೈಲ್ವೇ ಮೆಜಿಸ್ಟ್ರೇಟ್ ಮನೆಗೆ ಹೋಗಿದ್ದೇನೆ. ಆ ಮೆಜಿಸ್ಟ್ರೇಟ್‌ರವರು ಬ್ರಹ್ಮಕುಮಾರಿ ಸಮಾಜದಲ್ಲಿ ಪೂರ್ತಿಯಾಗಿ ಐಕ್ಯವಾದ ಭಕ್ತನು. ಆಗ ಆತನು ನನ್ನ ಗನ್‌ಲೈಸೆನ್ಸ್ ವಿಷಯವನ್ನು ತಿಳಿದುಕೊಂಡು ಹೀಗೆ ಅಂದಿದ್ದಾನೆ "ಏಕೆ ಗನ್‌ಲೈಸೆನ್ಸ್ ವೃಥಾ, ಈ ಸಂವತ್ಸರದ ಕೊನೆಗೆ ಪ್ರಳಯ ಬಂದು ಒಟ್ಟಾರೆ ಪ್ರಪಂಚವೆಲ್ಲಾ ಹೋಗುತ್ತದೆ" ಎಂದು ಹೇಳಿದನು. ಆಗ ಈ ಮಾತನ್ನು ನೀವು ಹೇಗೆ ಹೇಳುತ್ತಿದ್ದೀರೆಂದು ನಾನು ಕೇಳಿದೆನು. ಅದಕ್ಕೆ ಆತನು "ನಮ್ಮ ಬ್ರಹ್ಮಕುಮಾರಿ ಸಮಾಜದವರು ಹೇಳಿದ್ದಾರೆ. 1994ನೇ ಸಂವತ್ಸರದ ಕೊನೆಯಲ್ಲಿ ಪ್ರಳಯ ಬರುತ್ತದೆಂದು, ಆದ್ದರಿಂದ ನಾನು ಮನೆ ಕಟ್ಟಿಸಬೇಕೆಂದ ಕೆಲಸವನ್ನು ಸಹ ಬಿಟ್ಟಿದ್ದೇನೆ. ಪ್ರಳಯದಲ್ಲಿ ಎಲ್ಲ ನಾಶವಾಗಿ, ಎಲ್ಲರೂ ಇಲ್ಲದೆ ಹೋಗುವಾಗ ಈಗ ನಾವು ಕಟ್ಟಿಸಬೇಕೆಂದುಕೊಂಡಿರುವ ಮನೆ ವೃಥಾ ಆಗುತ್ತದೆ, ಈಗ ನೀವು ತಂದುಕೊಂಡಿರುವ ಗನ್‌ಲೈಸೆನ್ಸ್ ವೃಥಾ" ಎಂದು ಅಂದನು. ನಾನು ಆತನಿಗೆ ಸಾಧಾರಣ ಮನುಷ್ಯನ ಹಾಗೆಯೇ ಪರಿಚಯ. ನಾನು ಆಧ್ಯಾತ್ಮಿಕತಜ್ಞನು ಎಂದು ಆತನಿಗೆ ತಿಳಿದಿಲ್ಲ. ಏಕೆಂದರೆ ನಾನು ಎಲ್ಲಾದರೂ ಸರ್ವಸಾಧಾರಣ ವ್ಯಕ್ತಿಯಾಗಿಯೇ ಕಾಣಿಸುತ್ತಿರುತ್ತೇನೆ. ಕೆಲವು ಸಂವತ್ಸರಗಳ ಪರಿಚಯವಿದ್ದರೂ ಆತನು ತನಗೇ ಹೆಚ್ಚಿಗೆ ತಿಳಿದಿರುವುದೆಂದು, ತಾನೊಂದು ಸಂಸ್ಥೆಯಲ್ಲಿ ಜ್ಞಾನ ತಿಳಿದುಕೊಳ್ಳುತ್ತಿದ್ದೇನೆಂದು ಅಂದುಕೊಳ್ಳುತ್ತಿದ್ದನು. ಆದ್ದರಿಂದ ಆತನು ಬ್ರಹ್ಮಕುಮಾರಿ ಸಮಾಜದವರು ಹೇಳಿದ ವಿಷಯವನ್ನೇ ನನಗೂ ಹೇಳಿದನು. ಆತನು ಆ ವಿಧವಾಗಿ ಪ್ರಳಯ 1994ನೇ ಸಂವತ್ಸರ ಕೊನೆಯಲ್ಲಿ ಬರುತ್ತದೆಂದು ಹೇಳಿದ ಮಾತುಗಳನ್ನು ಮೌನವಾಗಿ ಕೇಳಿದೆನು. ಹಾಗೆ ನಡೆಯುವುದಿಲ್ಲ ಎಂದು ನನಗೆ ತಿಳಿದರೂ ನಾನು ಮಾತ್ರ ಏನೂ ಹೇಳಲಿಲ್ಲ. ನಂತರ ಸ್ವಲ್ಪ ಕಾಲದ ನಂತರ 1994ನೇ ಸಂವತ್ಸರ ಪೂರ್ತಿಯಾಗಿ ಮುಗಿದು ಹೋಗಿದೆ. ಆತನ ಮಾತು ಅಸತ್ಯವೆಂದು ಆತನಿಗೇ ಅರ್ಥವಾಗಿದೆ.

ಕ್ರೀ॥ಶ॥ 1996ನೇ ವರ್ಷ, ಒಂದು ಬುಕ್ ಸ್ಟಾಲಿನಲ್ಲ "ಕಲಿಯುಗಾಂತ 1999" ಎಂಬ ಪುಸ್ತಕವನ್ನು ನೋಡಿದೆನು. ಅದನ್ನು ವೇದವ್ಯಾಸ ಐ.ಎ.ಯಸ್. ಬರೆದಹಾಗೆ ತಿಳಿಯಿತು. ಆ ಕಾಲದಲ್ಲಿ ಆಪುಸ್ತಕ ಕೆಲವು ಲಕ್ಷ ಕಾಪಿಗಳು ಮಾರಿದ್ದಾರೆಂದು ಪ್ರಚಾರವಾಗಿದೆ. ಆ ಪುಸ್ತಕವನ್ನು ನಾನು ಸಹ ಓದಿದೆನು. 1999ಕ್ಕೆ ಕಲಿಯುಗ ಅಂತ್ಯವಾಗಲ್ಲ ಎಂದು ನನಗೆ ತಿಳಿದರೂ, ಅದನ್ನು ಕುರಿತು ಯಾರಿಗೂ ನಾನೇನು ಹೇಳಲಿಲ್ಲ. ನಂತರ ಸ್ವಲ್ಪ ಕಾಲಕ್ಕೆ 1999 ಸಹ ನಡೆದುಹೋಯಿತು. ಆದರೆ ಪ್ರಳಯ ಆಗಲಿಲ್ಲ, ಕಲಿಯುಗ ಅಂತ್ಯವೂ ಆಗಲಿಲ್ಲ. ಇಷ್ಟು ನಡೆದರೂ **"ನಾಚಿಕೆ ಇಲ್ಲದೆ ದಾರಿಯಲ್ಲಿ ಎದುರಾದ"** ಎನ್ನುವಂತೆ ಈಗ ಮತ್ತೊಂದು ಆಧ್ಯಾತ್ಮಿಕ ಸಂಸ್ಥೆಯವರು 2012 ಸಂವತ್ಸರ ಡಿಸೆಂಬರ್ 21ಕ್ಕೆ ಪ್ರಪಂಚ ಅಂತ್ಯವಾಗಿ ಹೋಗುತ್ತದೆಂದು, ನಂತರ ಕಲಿಯುಗ ಇರುವುದಿಲ್ಲವೆಂದು ಪ್ರಚಾರ ಮಾಡುತ್ತಿದ್ದಾರೆ. ಈ ವಿಷಯವನ್ನು ಒಂದು ಆಧ್ಯಾತ್ಮಿಕ ಸಂಸ್ಥೆ ಅಲ್ಲದೆ, ಕೆಲವರು ಜ್ಯೋತಿಷ್ಯರು ಸಹ ಅದೇ ವಿಷಯವನ್ನು ಹೇಳುತ್ತಿದ್ದಾರೆ. ಅಷ್ಟೆ ಅಲ್ಲದೆ ಕೆಲವರು ಖಗೋಳ ಶಾಸ್ತ್ರಜ್ಞರು ಸಹ 2012 ಸಂ॥ದಲ್ಲಿ ಪ್ರಳಯ ನಡೆಯುತ್ತದೆಂದು ಹೇಳುತ್ತಿದ್ದಾರೆ. ಈ ಮಧ್ಯಕಾಲದಲ್ಲಿ 2011 ಡಿಸೆಂಬರ್ 20ನೇ ತಾರೀಖು, ಟಿವಿ 9 ಛಾನಲ್‌ನಲ್ಲಿ "ಯುಗಾಂತ 365 ದಿನಗಳಲ್ಲಿ" ಎಂಬ ಸಮಸ್ಯೆ ಮೇಲೆ ಚರ್ಚಾವೇಧಿಕೆ ಪ್ರಸಾರ ಮಾಡಿದ್ದಾರೆ. ಆ ಚರ್ಚೆಯಲ್ಲಿ ಕೆಲವರು ಯುಗಾಂತ ಆಗುತ್ತದೆಂದು, ಕೆಲವರು ಯುಗಾಂತವಾಗಲ್ಲ ಎಂದು ಮಾತ ನಾಡುವುದು ನಡೆದಿದೆ. ಇದೆಲ್ಲಾ ಕೇಳಿದ ನಂತರ ಮತ್ತು ನೋಡಿದ ನಂತರ ನಮಗೆ ವಿಚಿತ್ರವೆನಿಸಿತು. ಹೆಂಡತಿ ಇಲ್ಲ ಗರ್ಭವು ಇಲ್ಲ ಮಗನ ಹೆಸರು ಮಾತ್ರ ಸೋಮಲಿಂಗ ಎನ್ನುವಹಾಗೆ, ಯುಗಗಳೆಂದರೆ ಏನೋ, ಅವುಗಳ ವಾಸ್ತವ ಹೆಸರುಗಳೇನೊ ತಿಳಿಯದು. ಹಾಗೆ ಯುಗಗಳ ಮುಂದಿರುವ ಹೆಸರುಗಳನ್ನು ಯಾರು ಇಟ್ಟಿದ್ದಾರೋ, ಏಕೆ ಇಟ್ಟಿದ್ದಾರೋ ಅವುಗಳ ಅರ್ಥ ವೇನೋ ತಿಳಿದಿಲ್ಲ. ಇನ್ನು ಯುಗಗಳು ಯಾವಾಗಿನಿಂದ ಪ್ರಾರಂಭವಾಗಿವೆಯೊ,

ಅವುಗಳ ಆಯಸ್ಸು ಎಷ್ಟೋ ತಿಳಿದಿಲ್ಲ. ಆದರೆ ಪ್ರಳಯ ಮಾತ್ರ 2012 ಎನ್ನುವುದು ನಡೆಯುತ್ತಿದೆ. 2012 ಪ್ರಳಯವನ್ನು ಕುರಿತು ಚಲನ ಚಿತ್ರಗಳು ಸಹ ಬಂದಿವೆ.

ಈ ಅಯೋಮಯ ಪರಿಸ್ಥಿತಿಯಿಂದ ಪ್ರಜೆಗಳು ಹೊರ ಬೀಳಬೇಕೆಂದರೆ ಎಲ್ಲರಿಗೂ ಇಲ್ಲಿಯವರೆಗು ತಿಳಿಯದ ರಹಸ್ಯಗಳೆಲ್ಲವನ್ನು ಚೇದಿಸುತ್ತಾ ಒಂದು ಗ್ರಂಥವನ್ನು ಬರೆಯಬೇಕೆಂದುಕೊಂಡಿದ್ದೇವೆ. ಈಗ ಆ ಉದ್ದೇಶವನ್ನು ಕಾರ್ಯರೂಪದಲ್ಲಿಟ್ಟಿದ್ದೇವೆ. ಈ ಗ್ರಂಥದಲ್ಲಿ ಪ್ರತಿ ವಿಷಯವು ಆಧ್ಯಾತ್ಮಿಕದಿಂದ ಜೊತೆಗೂಡಿಸಿ ವಿವರಿಸುವುದು ನಡೆದಿದೆ. ಕಾಲವು, ಮನುಷ್ಯನಲ್ಲಿನ ಜೀವಾತ್ಮ ಒಂದಕ್ಕೊಂದು ಸಂಬಂಧಹೊಂದಿವೆ. ಆದ್ದರಿಂದ ಮನುಷ್ಯನಲ್ಲಿನ ಗುಣಗಳ ಸಂಖ್ಯೆಯಿಂದ ಯುಗಗಳ (ಯೋಗಗಳ) ನ್ನು ಕುರಿತು ಹೇಳಿಕೊಂಡಿದ್ದೇವೆ. ಈಗ ಯುಗಾಂತವನ್ನು ಸಹ ಮನುಷ್ಯನಿಂದಲೇ ಪ್ರಾರಂಭಿಸೋಣ. ಯುಗಾಂತವು ಜೀವಿಗಳಿಗಾಗಿಯೇ ನಿರ್ಣಯಿಸಲಾಗಿದೆ. ಆದ್ದರಿಂದ ಜೀವವಿರುವ ಮನುಷ್ಯ ನಿಂದಲೇ ವಿವರಿಸಿಕೊಳ್ಳಬೇಕು. ಮನುಷ್ಯನ ಶರೀರದಲ್ಲಿ ತಲೆ ಮಧ್ಯಭಾಗದಲ್ಲಿ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳೆನ್ನುವ ನಾಲ್ಕು ಚಕ್ರಗಳ ಸಮುದಾಯವಿದೆ. ಎಲ್ಲದಕ್ಕಿಂತ ಮೇಲಿರುವ ಚಕ್ರವನ್ನು ಬ್ರಹ್ಮಚಕ್ರ ನ್ನುತ್ತೇವೆ. ಬ್ರಹ್ಮಚಕ್ರ ಎರಡು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಈ ಚಕ್ರವು ಪ್ರಪಂಚ ಆಯಸ್ಸಿಗೆ ಸಂಬಂಧ ಪಟ್ಟಿರುವುದು. ಬ್ರಹ್ಮ ಚಕ್ರದಲ್ಲಿನ ಒಂದು ಭಾಗ ಪೂರ್ತಿಯಾಗಿ ತಿರುಗುವುದಕ್ಕೆ ಸಾವಿರ ಯುಗಗಳು (ಯೋಗಗಳು) ಬೇಕಾಗುತ್ತದೆ. ಎರಡು ಭಾಗಗಳು ತಿರುಗುವು ದಕ್ಕೆ ಎರಡು ಸಾವಿರ ಯುಗಗಳು ಬೇಕಾಗುತ್ತದೆ. ಒಂದು ಬಾರಿ ಸೃಷ್ಠಿ ತಯಾರಾಗಿ ಅದು ಸ್ವಲ್ಪಕಾಲವಿದ್ದು, ನಂತರ ಸ್ವಲ್ಪಕಾಲ ಇಲ್ಲದೆಹೋಗಿ, ನಂತರ ಸೃಷ್ಠಿ ಮೊದಲಾಗುವುದಕ್ಕೆ ಒಂದು ಕಲ್ಪ ಎನ್ನುತ್ತೇವೆ. ಬ್ರಹ್ಮಚಕ್ರ ಒಂದು ಸುತ್ತು ಪೂರ್ತಿಯಾಗಿ ತಿರುಗುವುದನ್ನು ಒಂದು ಕಲ್ಪ ಎಂದು ಹೇಳಬಹುದು. ಮುಂದಿನ ಪುಟದಲಿ ಬ್ರಹ್ಮಚಕ್ರದ ಚಿತ್ರವನ್ನು ನೋಡಿರಿ.




**ಬ್ರಹ್ಮಚಕ್ರ**

ಈ ವಿಧವಾಗಿ ಪ್ರಪಂಚ ಸಾವಿರಯುಗಗಳ (ಯೋಗಗಳ) ಕಾಲ ಇರುವುದಕ್ಕೂ, ಸಾವಿರಯುಗಗಳ ಕಾಲ ಇಲ್ಲದೆ ಇರುವುದಕ್ಕೂ, ಒಟ್ಟಾರೆ ಎರಡು ಸಾವಿರ ಯುಗಗಳ ಕಾಲ ಒಂದು ಕಲ್ಪವಾಗಿ ನಿರ್ಣಯಿಸುವುದಕ್ಕೂ ಮೂಲ ಮನುಷ್ಯನ ತಲೆಯಲ್ಲಿಯೇ ಇದೆ. ಮನುಷ್ಯನ ತಲೆಯಲ್ಲಿ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳು ನಾಲ್ಕು ಬ್ರಹ್ಮನಾಡಿಯಲ್ಲಿನ ಶಕ್ತಿಯನ್ನು ಆಧಾರ ಮಾಡಿಕೊಂಡು ತಿರುಗುತ್ತಿವೆ. ಬ್ರಹ್ಮನಾಡಿ ಶಕ್ತಿಯನ್ನು ಪರಿಶೀಲಿಸಿ ನೋಡಿದರೆ ಅದರಲ್ಲಿ ಆತ್ಮಶಕ್ತಿ ಮೇಲಕ್ಕೆ ತಿಳಿದರೂ, ಅದರಲ್ಲಿ ಸಹ ಪರಮಾತ್ಮ ಶಕ್ತಿ ವ್ಯಾಪಿಸಿದೆ. ಈಗ ಮೂರು ಆತ್ಮಗಳ ಸ್ಥಾನಗಳನ್ನು ವಿವರಿಸಿಕೊಂಡರೆ, ಜೀವಾತ್ಮ ಗುಣಚಕ್ರದಲ್ಲಿನ ಮೂರು ಭಾಗಗಳಲ್ಲಿ ಯಾವುದೋ ಒಂದರಲ್ಲಿ ಅತಿ ಸ್ವಲ್ಪವಾದ ಸೂಕ್ಷ್ಮಬಿಂದುವಾಗಿ ಇದೆ. ಎರಡನೆಯದಾದ ಆತ್ಮ ಬ್ರಹ್ಮನಾಡಿಯನ್ನು ಕೇಂದ್ರವಾಗಿ ಮಾಡಿಕೊಂಡು ನಾಡಿಗಳ ಮುಖಾಂತರ ಶರೀರವೆಲ್ಲಾ ವ್ಯಾಪಿಸಿದೆ. ಆತ್ಮ ಶರೀರದಲ್ಲಿ ಮಾತ್ರವೇ ಇದೆ. ಶರೀರದ ಹೊರಗೆ ಇಲ್ಲ ಎಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಮೂರನೆಯ ದಾದ ಪರಮಾತ್ಮ ಮಾತ್ರ ಶರೀರದ ಒಳಗೂ, ಶರೀರದ ಹೊರಗೂ ಅಣುಅಣು ವಿನಲ್ಲೂ ವ್ಯಾಪಿಸಿದೆ. ಪ್ರತಿ ಶರೀರದಲ್ಲಿಯೂ ಪರಮಾತ್ಮ ಶಕ್ತಿ ಎರಡು ಸಾವಿರ ಚೈತನ್ಯ ಶಕ್ತಿಯಾಗಿ ಬದಲಾಗಿ ಆತ್ಮದಲ್ಲಿ ಸೇರಿ ಹೋಗಿದೆ. ಆತ್ಮ ಚೈತನ್ಯಶಕ್ತಿ ಪರಮಾತ್ಮ ಶಕ್ತಿಯೆಂದೇ ತಿಳಿಯಬೇಕು. ಎರಡು ಸಾವಿರ ಚೈತನ್ಯಗಳಾಗಿರುವ ಶಕ್ತಿ ಜೀವಿಯ ಶರೀರದಲ್ಲಿದೆ. ಎರಡು ಸಾವಿರಗಳಲ್ಲಿ ಐದುನೂರು (500) ಯೂನಿಟ್‌ಗಳ ಶಕ್ತಿ ಜೀವಾತ್ಮನಲ್ಲಿ ಸೇರಿದೆ. (ಒಂದು ಚೈತನ್ಯ ಶಕ್ತಿಯನ್ನು

ಒಂದು ಯೂನಿಟ್ ಆಗಿ ಹೇಳಲಾಗಿದೆಯೆಂದು ಗಮನಿಸಬೇಕು). ಎರಡು ಸಾವಿರ ಯೂನಿಟ್ ಶಕ್ತಿಯಲ್ಲಿ 500 ಯೂನಿಟ್ ಜೀವಿಯಲ್ಲಿದ್ದು, ಬ್ರಹ್ಮನಾಡಿಯಲ್ಲಿರುವ ಆತ್ಮದ ಏಳುನಾಡೀ ಕೇಂದ್ರಗಳಲ್ಲಿ ಮೊದಲ ಸ್ಥಾನವಾದ ಸಹಸ್ರಾರದಲ್ಲಿ 500 ಯೂನಿಟ್‌ಗಳ ಶಕ್ತಿ ಇರುವಾಗ, ಎರಡನೇ ಸ್ಥಾನವಾದ ಆಗ್ನೇಯ ನಾಡೀಕೇಂದ್ರದಲ್ಲಿ ಆತ್ಮಶಕ್ತಿ 500 ಯೂನಿಟ್ ಇದೆ. ನಂತರ ಮೂರನೆ ನಾಡೀಕೇಂದ್ರವಾದ ವಿಶುದ್ಧದಲ್ಲಿ 250 ಯೂನಿಟ್‌ಗಳಿದ್ದು, ನಾಲ್ಕನೆಯ ಸ್ಥಾನವಾದ ಅನಾಹತ ಸ್ಥಾನದಲ್ಲಿ 125 ಯೂನಿಟ್‌ಗಳ ಶಕ್ತಿ ಇದೆ. ನಂತರ ಐದನೆ ನಾಡೀಕೇಂದ್ರವಾದ ಮಣಿಪೂರಕದಲ್ಲಿ 62.1/2 ಯೂನಿಟ್‌ಗಳಿದ್ದು, ಆರನೆ ನಾಡೀಕೇಂದ್ರವಾದ ಸ್ವಾಧಿಷ್ಠಾನದಲ್ಲಿ 31.1/4 ಚೈತನ್ಯಗಳ ಶಕ್ತಿ ಇದೆ. ಇನ್ನು ಕೊನೆಯ ನಾಡೀಕೇಂದ್ರವಾದ ಆಧಾರಸ್ಥಾನದಲ್ಲಿ 31.1/4 ಯೂನಿಟ್‌ಗಳೆ ಇವೆ. ಈ ವಿಧವಾಗಿ ಪರಮಾತ್ಮ ಶಕ್ತಿ ಒಂದು ಸಜೀವ ಶರೀರದಲ್ಲಿ ಎರಡುಸಾವಿರ ಚೈತನ್ಯಗಳ (ಯೂನಿಟ್‌ಗಳ) ಶಕ್ತಿಯಾಗಿ ಇದ್ದು ಏಳುನಾಡೀ ಕೇಂದ್ರಗಳಲ್ಲಿ ವಿಭಜನೆಯಾಗಿ ಇದೆ. ಶರೀರದಲ್ಲಿ ಪರಮಾತ್ಮ ಶಕ್ತಿ ಆತ್ಮ ಭಾಗಗಳಾಗಿರುವ ವಿಧಾನಗಳನ್ನು ಚಿತ್ರರೂಪದಲ್ಲಿ ಮುಂದಿನ ಪುಟದಲ್ಲಿ ನೋಡಿರಿ.

ಪರಮಾತ್ಮ ಶಕ್ತಿ ಆತ್ಮ ಶಕ್ತಿಯಾಗಿ ಬದಲಾಗುವುದು, ಆತ್ಮದಿಂದ ಜೀವಾತ್ಮ ವಿಭಜನೆ, ಶರೀರದಲ್ಲಿ ಆತ್ಮ ಭಾಗಗಳಿರುವ ವಿಧಾನವನ್ನು ನೋಡಿದ್ದೇವೆ ಅಲ್ಲವೆ! ಪರಮಾತ್ಮನ ಅಣುವಷ್ಟು ಶಕ್ತಿ ಎರಡು ಸಾವಿರ (2000) ಚೈತನ್ಯಶಕ್ತಿಗಳಾಗಿ ಬದಲಾಗುವುದು, ಹಾಗೆ ಬದಲಾದ ಆತ್ಮ ಶಕ್ತಿಯಲ್ಲಿ ಸ್ವಲ್ಪ ಜೀವಾತ್ಮವಾಗಿ ಬಿಟ್ಟುಹೋಗುವುದು, ಐದು ನೂರು (500) ಚೈತನ್ಯ ಶಕ್ತಿಗಳು (ಐದುನೂರು ಯೂನಿಟ್‌ಗಳು) ಜೀವಾತ್ಮವಾಗಿ ಬೇರ್ಪಟ್ಟಾಗ ಉಳಿದ ಹದಿನೈದು ನೂರು (1500) ಚೈತನ್ಯ ಶಕ್ತಿಗಳು ಶರೀರದೊಳಗಿನ ನಾಡೀಕೇಂದ್ರಗಳಲ್ಲಿದ್ದು ಶರೀರವನ್ನೆಲ್ಲಾ ಹರಿದಾಡುವುದು ನಡೆಯುತ್ತದೆಂದು ಮೇಲಿನ ಚಿತ್ರಗಳಿಂದ ತಿಳಿಯುತ್ತಿದೆ. ಈ ವಿಧವಾಗಿ ಒಂದು ಜೀವ ಶರೀರದಲ್ಲಿ ದೈವಶಕ್ತಿ ಎರಡು ಸಾವಿರ ಚೈತನ್ಯಗಳಾಗಿ ಇರುವುದರಿಂದ, ಎರಡು ಸಾವಿರ ಯುಗಗಳು ದೇವರಿಗೆ ಒಂದು ದಿನವಾಗಿ

## ಪರಮಾತ್ಮನಿಂದ ಆತ್ಮ ವಿಭಜನೆಯ ಚಿತ್ರ




ಪರಮಾತ್ಮನಿಂದ ಆತ್ಮ, ಆತ್ಮನಿಂದ ಜೀವಾತ್ಮ ವಿಭಜನೆ ಚಿತ್ರ
2000 ಪರಮಾತ್ಮನಿಂದ ಬಂದು ಆತ್ಮ
1000
1000
500 → ಜೀವಾತ್ಮ
500 → ಆತ್ಮದ ಮೊದಲಭಾಗ
500
500 → ಆತ್ಮದ ಎರಡನೆಯ ಭಾಗ
250
250 → ಆತ್ಮದ ಮೂರನೆಯ ಭಾಗ
125
125 → ಆತ್ಮದ ನಾಲ್ಕನೆಯ ಭಾಗ
62 1/2
62 1/2 → ಆತ್ಮದ ಐದನೆಯ ಭಾಗ
31 1/4
31 1/4 → ಆತ್ಮದ ಆರನೆಯ ಭಾಗ
31 1/4 → ಆತ್ಮದ ಏಳನೆಯ ಭಾಗ

# ಶರೀರದಲ್ಲಿ ಆತ್ಮ ಭಾಗಗಳು ಇರುವ ವಿಧಾನ.



ಲೆಕ್ಕಿಸಲಾಗುತ್ತಿದೆ. ಈ ಸೂತ್ರದ ಪ್ರಕಾರ ಸಾವಿರ ಯುಗಗಳ ನಂತರ ಪ್ರಳಯ, ಹಾಗೆ ಸಾವಿರ ಯುಗಗಳ ನಂತರ ಪ್ರಭವ ನಿರ್ಣಯಿಸಲಾಗಿದೆ. ಒಂದು ಪ್ರಭವ (ಸೃಷ್ಠಿ), ಪ್ರಳಯ (ನಾಶ) ಎರಡು ಸೇರಿ ದೈವದ ಒಂದು ದಿನವಾಗಿ ಲೆಕ್ಕಿಸಲಾಗಿದೆ. ದೇವರು ಅನಂತ ಶಕ್ತಿಮಯನು, ಅಪಾರಯುಕ್ತಿವಂತನು, ಆದರೆ ಆತನು ಯಾರೋ, ಹೇಗಿರುತ್ತಾನೋ, ಆತನ ಆಯುಸ್ಸೆಷ್ಟೊ ಯಾರಿಗೂ ತಿಳಿಯದು. ಅಷ್ಟೇ ಅಲ್ಲದೆ **ಆತನು (ದೇವರು) ನಿಜವಾಗಿ ಇಲ್ಲ ಸುಳ್ಳಾಗಿ ಇದ್ದಾನೆ.** ಈ ಅರ್ಥದ ಪ್ರಕಾರ ಆತನಿಗೆ ಆಕಾರವಿಲ್ಲ, ಹೆಸರೂ ಇಲ್ಲ, ಕ್ರಿಯೆ (ಕೆಲಸ) ಇಲ್ಲ. ಆದ್ದರಿಂದ ಆಯುಸ್ಸು ಕೂಡಾ ಇಲ್ಲ. ಆತನೇ ಎಲ್ಲರನ್ನು ತಯಾರು ಮಾಡುವವನು (ಸೃಷ್ಠಿಕರ್ತ). ಹಾಗೆ ಆತನೇ ಎಲ್ಲರನ್ನು ನಾಶ ಮಾಡುವವನು (ಲಯಕರ್ತ). ಸೃಷ್ಠಿ, ಲಯಗಳು ದೇವರವೇ, ಆದ್ದರಿಂದ ನಮ್ಮ ತಲೆಯಲ್ಲಿ ನಾಲ್ಕು ಚಕ್ರಗಳಲ್ಲಿ ಮೇಲಿರುವ ಚಕ್ರದ ಹೆಸರು ಬ್ರಹ್ಮಚಕ್ರವೆಂದು ಹೇಳಲಾಗಿದೆ. ಅಷ್ಟೇ ಅಲ್ಲದೆ ಬ್ರಹ್ಮಚಕ್ರ ಎರಡು ಭಾಗಗಳಾಗಿ ವಿಭಜಿಸಲಾಗಿದೆ, ಅದರಲ್ಲಿ ಒಂದು ಸೃಷ್ಠಿಗೆ, ಮತ್ತೊಂದು ಲಯಕ್ಕೆ ಗುರುತಾಗಿ ಇವೆ.

ಕೆಲವರು ಜ್ಯೋತಿಷ್ಯರು, ಕೆಲವರು ವೇದಾಂತಿಗಳು ಸೃಷ್ಠ್ಯಾದಿಯಿಂದ ಇಷ್ಟು ಕಾಲ ನಡೆದುಹೋಗಿದೆಯೆಂದು, ಇಷ್ಟು ಮನ್ವಂತರಗಳು ನಡೆದು ಹೋಗಿವೆಯೆಂದು, ಇನ್ನು ಇಷ್ಟು ನಡೆಯಬೇಕಾಗಿದೆಯೆಂದು ಹೇಳುತ್ತಿದ್ದಾರೆ. 196 ಕೋಟಿ 8 ಲಕ್ಷ 53 ಸಾವಿರ 145 ಸಂವತ್ಸರಗಳು ಕಳೆದು ಹೋಗಿವೆಯೆಂದು, ಇನ್ನು ನಡೆಯಬೇಕಾಗಿರುವವು 235 ಕೋಟಿ 91 ಲಕ್ಷ 46 ಸಾವಿರ 855 ದಿನಗಳು ಇವೆಯೆಂದು ಒಂದು ಕಡೆ ಹೇಳುತ್ತಾ, ಮತ್ತೊಂದು ಕಡೆ ಪ್ರಳಯ ಈ ಸಂವತ್ಸರವೇ ಬರುತ್ತಿದೆಯೆಂದು ಹೇಳುತ್ತಿದ್ದಾರೆ. ಇವರು ಹೇಳುವ ಮಾತುಗಳೆಲ್ಲ ವಾಸ್ತವವೇ ಎಂದು ಆಲೋಚಿಸಿ ನೋಡಿದರೆ, ನಮ್ಮ ಬುದ್ಧಿಗೆ ತಿಳಿದಿದ್ದು ಏನೆಂದರೆ! ನಾಲ್ಕು ಯೋಗಗಳು (ಯುಗಗಳು) ಒಂದಾದ ನಂತರ ಒಂದು ಬರುವುದು ವಾಸ್ತವವೇ. ಗೀತೆಯಲ್ಲಿ ಭಗವಂತನು ಹೇಳಿದ ಪ್ರಕಾರ ಸಾವಿರ ಯುಗಗಳು ದೇವರಿಗೆ ಹಗಲು, ಹಾಗೆಯೇ ಸಾವಿರ ಯುಗಗಳು

ದೇವರಿಗೆ ರಾತ್ರಿಯಾಗಿ ಇರುವುದು ವಾಸ್ತವವೇ. ದೇವರಿಗೆ ಹಗಲು, ರಾತ್ರಿ ಎಂದು ಹೇಳಿದಹಾಗೆ ಮನುಷ್ಯನಿಗೂ ಸಹ ಹಗಲು ರಾತ್ರಿಗಳಿವೆ. ದೇವರ ಹಗಲಿನಲ್ಲಿ ಜೀವರಾಶಿಗಳ ಸೃಷ್ಠಿ, ಸ್ಥಿತಿ, ಲಯಗಳು ಇವೆ. ನಂತರ ದೇವರ ರಾತ್ರಿಯಲ್ಲಿ ಸೃಷ್ಠಿಯೇ ಇಲ್ಲ. ನಂತರ ದೇವರ ಹಗಲು ಪ್ರಾರಂಭವಾಗುತ್ತಲೇ ಸೃಷ್ಠಿ ತಯಾರಾಗುತ್ತದೆ. ಹಾಗೆ ಮನುಷ್ಯನ ಹಗಲು ಕಾಲ ಪ್ರಾರಂಭಗುತ್ತಲೇ ನಿದ್ರೆಯಿಂದ ಏಳುತ್ತಾನೆ. ನಿದ್ರೆಯಿಂದ ಎದ್ದಾಗಲೆ ಪ್ರಪಂಚವು, ಇತರ ಜೀವರಾಶಿ ಗಳು ತಿಳಿಯುತ್ತವೆ. ಮನುಷ್ಯನಿಗೆ ಹಗಲು ಕಾಲ ಮುಗಿದುಹೋದ ನಂತರ ರಾತ್ರಿ ಕಾಲ ನಿದ್ರೆಗೆ ಉಪಕ್ರಮಿಸುವನು, ಆಗ ಮನುಷ್ಯನಿಗೆ ಏನೂ ತಿಳಿಯದೆ ಹೋಗುತ್ತಿದೆ. ಮನುಷ್ಯ ಹಗಲು ಎಚ್ಚರದಲ್ಲಿರುವಾಗ ಕಾಲ ಗತಿಸಿದ ಹಾಗೆ, ರಾತ್ರಿ ನಿದ್ರೆಯಲ್ಲಿ ಇರುವಾಗ ಸಹ ಕಾಲ ಕಳೆದು ಹೋಗುತ್ತಿದೆ. ಚೆನ್ನಾಗಿ ಯೋಚಿಸಿದರೆ ಮನುಷ್ಯನಿಗೆ ನಿದ್ರೆ ಮರಣವಂತಹುದು, ಎಚ್ಚರ ಹುಟ್ಟಿನಂತಹುದು. ಎಚ್ಚರದಲ್ಲಿರುವವನು ನಿದ್ರಿಸುವುದು ತಪ್ಪುವುದಿಲ್ಲ, ನಿದ್ರಿಸುವವನು ಎಚ್ಚರಗೊಳ್ಳುವುದು ತಪ್ಪುವುದಿಲ್ಲ. ಗೀತೆಯಲ್ಲಿ ಹುಟ್ಟಿದವನು ಸಾಯುವುದು ತಪ್ಪುವುದಿಲ್ಲ, ಸತ್ತವನು ಹುಟ್ಟುವುದು ತಪ್ಪುವುದಿಲ್ಲ, ಎಂದು ಭಗವಂತನು ಹೇಳಿದಹಾಗೆ ಮನುಷ್ಯ ಸಾವು ಹುಟ್ಟುಗಳಿಗೆ ಸಮಾನವಾದ ನಿದ್ರೆ ಎಚ್ಚರಗಳನ್ನು ಹೊಂದುತ್ತಿದ್ದಾನೆ. ನಿದ್ರೆ ಎಚ್ಚರ ಮನುಷ್ಯನಿಗೆ ನಿತ್ಯವು ಪ್ರತ್ಯಕ್ಷ ಅನುಭವಗಳು.

ಕ್ಷಣ ಕ್ಷಣವೂ ಕಾಲ ಕಳೆದು ಹೋಗುತ್ತಿದೆ. ಕ್ಷಣವನ್ನು ಸೆಕೆಂಡು ಎಂದು ಹೇಳುತ್ತಿದ್ದೇವೆ. ಮನುಷ್ಯ ತನ್ನ ಜೀವನವನ್ನು ಸಾಗಿಸುವುದರಲ್ಲಿ ಕಾಲ ಕಳೆದು ಹೋಗುತ್ತಿದೆ. ಪ್ರತಿ ಸೆಕೆಂಡು ಕಳೆದು ಹೋಗುವದರಿಂದ ಮನುಷ್ಯ ಮರಣಕ್ಕೆ ಹತ್ತಿರವಾಗುತ್ತಿದ್ದಾನೆಂದು ಅರ್ಥವಾಗುತ್ತಿದೆ. ಮನುಷ್ಯ ಬೆಳೆಯುವುದರಲ್ಲೆ ದಿನಗಳು ಕಳೆದು ಹೋಗುತ್ತಿವೆ. ಮರಣ ಸಮೀಪಿಸುತ್ತಿದೆ. ಕಾಲವನ್ನು ಸೆಕೆಂಡುಗಳಲ್ಲಿ ಅಳೆದರೆ ಅರವತ್ತು (60) ಸೆಕೆಂಡುಗಳು ಒಂದು ನಿಮಿಷ. ಹಾಗೆ ಅರವತ್ತು (60) ನಿಮಿಷಗಳಿಗೆ ಒಂದು ಗಂಟೆ, ಹನ್ನೆರಡು (12) ಗಂಟೆಗಳಿಗೆ ಒಂದು ಹಗಲಾಗಿ ಇದೆ. ಇವುಗಳನ್ನೇ ಸೆಕೆಂಡುಗಳಲ್ಲಿ ಹೇಳಿದರೆ...

**ಒಂದು ಗಂಟೆಗೆ (60 ನಿಮಿಷಗಳಿಗೆ) =3,600 ಸೆಕೆಂಡುಗಳು – 60 X 60 =3600**

**12ಗಂಟೆಗಳಿಗೆ (ಒಂದು ಹಗಲಿಗೆ) = 43,200 ಸೆಕೆಂಡುಗಳು – 3,600 X 12 = 43,200**

**10 ಹಗಲುಗಳಿಗೆ (120ಗಂ॥) = 4,32,000 ಸೆಕೆಂಡುಗಳು – 43,200 X 10 = 4,32,000**

**20 ಹಗಲುಗಳಿಗೆ (240 ಗಂ॥) = 8,64,000 ಸೆಕೆಂಡುಗಳು – 43,200 X 20 = 8,64,000**

**30 ಹಗಲುಗಳಿಗೆ (360 ಗಂ॥) = 12,96,000 ಸೆಕೆಂಡುಗಳು – 43,200 X 30 = 12,96,000**

**40 ಹಗಲುಗಳಿಗೆ (480 ಗಂ॥) = 17,28,000 ಸೆಕೆಂಡುಗಳು – 43,200 X 40 = 17,28,000**

**100 ಹಗಲುಗಳಿಗೆ (1200 ಗಂ॥) = 43,20,000 ಸೆಕೆಂಡುಗಳು – 43,200 X 100 =43,20,000**

**25,000 ಹಗಲು (3,00,000 ಗಂ॥) = 108,00,00,000 ಸೆ॥ – 43,200 X 25000 = 108,00,00,000**

ಕಾಲದಲ್ಲಿ ದೊಡ್ಡದು ಸಂವತ್ಸರ, ಹಾಗೆ ಚಿಕ್ಕದು ಕ್ಷಣ (ಸೆಕೆಂಡು), ದೇವರು ದೊಡ್ಡವನು ಆದ್ದರಿಂದ 108 ಕೋಟಿ ಸಂವತ್ಸರಗಳನ್ನು ಆತನಿಗೆ ಒಂದು ಹಗಲು ಎಂದು ಹೇಳಿದ್ದೇವೆ. ಮನುಷ್ಯ ಚಿಕ್ಕವನಾದ್ದರಿಂದ 108 ಕೋಟಿ ಸೆಕೆಂಡುಗಳನ್ನು ಒಂದು ಕರ್ಮ ಹಗಲು ಎಂದು ಹೇಳುತ್ತಿದ್ದೇವೆ. ದೇವರಿಗೆ ಮೊದಲು ಇಲ್ಲ, ತುದಿಯು ಇಲ್ಲ ಆದ್ದರಿಂದ ಆತನಿಗೆ ಆಯುಸ್ಸು ಎನ್ನುವುದೇ ಇಲ್ಲ. 108 ಕೋಟಿ ಸಂವತ್ಸರಗಳು ಒಂದು ಹಗಲು ಎಂದು ಲೆಕ್ಕಿಸಲಾಗುತ್ತದೆ, ಆದರೆ ಇಷ್ಟು ದಿನಗಳಿಗೆ ಆಯುಸ್ಸು ಮುಗಿದು ಹೋಗುತ್ತದೆಂದು ಹೇಳಲಾಗುವುದಿಲ್ಲ. ಹಾಗೆ **ಮನುಷ್ಯನಿಗೆ 69 ಸಂವತ್ಸರಗಳ, 5 ತಿಂಗಳುಗಳ, 10 ದಿನಗಳು (108 ಕೋಟಿ ಸೆಕೆಂಡುಗಳು) ಒಂದು ಕರ್ಮ ಹಗಲು** ಎಂದು ಹೇಳಲಾಗಿದೆ. ಅಷ್ಟೇ ಆಗಲಿ ಜೀವಾತ್ಮನ ಆಯುಸ್ಸು ಇಷ್ಟು ಎಂದು ಯಾರೂ ಹೇಳಲಾರರು. ದೇವರಿಗೆ ಕರ್ಮಇಲ್ಲ, ಆದ್ದರಿಂದ 108 ಕೋಟಿ ಸಂವತ್ಸರಗಳು ಆತನಿಗೆ ಒಂದು ಹಗಲಾದರೆ, ಮನುಷ್ಯನಿಗೆ ಕರ್ಮ ಇದೆ, ಆದ್ದರಿಂದ 108 ಕೋಟಿ ಸೆಕೆಂಡುಗಳಿಗೆ ಜೀವಾತ್ಮನಿಗೆ ಒಂದು ಕರ್ಮ ಹಗಲು ಎಂದು ಹೇಳಲಾಗಿದೆ. ದೇವರಿಗೆ ಆಯುಸ್ಸೂ ಇಲ್ಲ, ಅಂತ್ಯವೂ ಇಲ್ಲ. ಹಾಗೆ ಜೀವಿಗೆ ಆಯುಸ್ಸು ಇಲ್ಲ, ಆದರೇ ಅಂತ್ಯವಿದೆ. ಜೀವಾತ್ಮನ ಅಂತ್ಯ ಆತನ ಕರ್ಮವನ್ನು

ಅನುಸರಿಸಿ ಇರುತ್ತದೆ. ಕರ್ಮ ಮುಗಿದು ಹೋದರೆ ಜೀವಿಯು ಅಂತ್ಯವಾಗಿ ಹೋಗುವನು. ಆದ್ದರಿಂದ ಜಿವಿಯನ್ನು ಕ್ಷರ ಎಂದು ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಹೇಳಿದ್ದಾರೆ. ಕರ್ಮ ಮುಗಿದು ಹೋಗುವವರೆಗು ಜೀವಿಯು ನಶಿಸದೆ, ಜೀವನವನ್ನು ಸಾಗಿಸುತ್ತಲೇ ಇರುವನು. ಜೀವಿಯು ಧರಿಸಿದ ಶರೀರ ನಶಿಸಿದರೂ ಅದು ಶರೀರದ ನಾಶವೇ ಹೊರೆತು, ಜೀವಿಯ ನಾಶವಲ್ಲ.

ಅತಿ ಚಿಕ್ಕ ಕಾಲವಾದ ಕ್ಷಣ (ಸೆಕೆಂಡು) ದಿಂದ ಜೀವಾತ್ಮನನ್ನು ಲೆಕ್ಕಿಸಬಹುದು. ಹಾಗೆ ಬಹಳ ದೊಡ್ಡ ಕಾಲವಾದ ಸಂವತ್ಸರದಿಂದ ದೇವರನ್ನು ಲೆಕ್ಕಿಸಬಹುದು. ಆದ್ದರಿಂದ **ಕೋಟಿ ಸಂವತ್ಸರಗಳು ದೇವರ ಹಗಲು ಎಂದು, ಕೋಟಿ ಸೆಕೆಂಡುಗಳು ಜೀವಾತ್ಮನ ಕರ್ಮಹಗಲು ಎಂದು ಲೆಕ್ಕಿಸುತ್ತಿದ್ದೇವೆ.** ಈಗ ಕೆಲವರು ಕರ್ಮಹಗಲು ಎಂದರೆ ಏನು ಎಂದು ಪ್ರಶ್ನೆ ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗಿದೆ. ಜೀವಾತ್ಮನು ನಿತ್ಯವೂ ಕರ್ಮವನ್ನು ಅನುಭವಿಸುತ್ತಾ, ಕರ್ಮವನ್ನು ಸಂಪಾದಿಸಿಕೊಳ್ಳುತ್ತಿದ್ದಾನೆ. ಅನುಭವಿಸುವ ಕರ್ಮ ಪ್ರಾರಬ್ಧವಾದರೆ, ಸಂಪಾದಿಸಿಕೊಳ್ಳುವ ಕರ್ಮವನ್ನು ಆಗಾಮಿಕರ್ಮ ಎನ್ನುತ್ತೇವೆ. ಸಂಪಾದಿ ಸಿಕೊಳ್ಳುವ ಹೊಸ ಕರ್ಮವೇ ಅಲ್ಲದೆ, ಅನುಭವಿಸುತ್ತಿರುವ ಪ್ರಾರಬ್ಧವು ಅಲ್ಲದೆ, ಉಳಿದು ನೆಲೆಯಿರುವ ಕರ್ಮವನ್ನು ಸಂಚಿತ ಕರ್ಮ ಎನ್ನುತ್ತೇವೆ. ಹೊಸದಾಗಿ ಸಂಪಾದಿಸಿಕೊಂಡಿರುವ ಆಗಾಮಿಕರ್ಮ ಒಂದು ಬಾರಿ ಸಂಚಿತವಾಗಿ ಬದಲಾಗುತ್ತದೆ. ಸಂಚಿತ ಕರ್ಮದಿಂದ ಜನ್ಮ ಸಮಯದಲ್ಲಿ ಪ್ರಾರಬ್ಧಕರ್ಮ ನಿರ್ಣಯಿಸಲಾಗಿರುತ್ತದೆ. ಇದು ಆಗಾಮಿ, ಸಂಚಿತ, ಪ್ರಾರಬ್ಧ ಕರ್ಮಗಳ ಸಮಾಚಾರವು. ಮುಖ್ಯವಾಗಿ ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ! ಜೀವಾತ್ಮನು ಸಂಪಾದಿಸಿಕೊಳ್ಳುವ ಆಗಾಮಿಕರ್ಮ ಜೀವಾತ್ಮನ ಲೆಕ್ಕದಲ್ಲಿ 108 ಕೋಟಿ ಸೆಕೆಂಡುಗಳಿಗೆ (69 ಸಂ॥, 5 ತಿಂಗಳು, 10 ದಿನಗಳಿ)ಗೆ ಒಂದು ಬಾರಿ ಸಂಚಿತ ಕರ್ಮದೊಳಗೆ ಸೇರಿಹೋಗಿ ಸಂಚಿತ ಕರ್ಮವಾಗಿ ಬದಲಾಗುತ್ತದೆ. ಒಂದು ಭಾರಿ ಆಗಾಮಿಕರ್ಮ ಸಂಚಿತ ಕರ್ಮದಲ್ಲಿ ಸೇರಿ ಹೋದರೆ, ಅಲ್ಲಿಂದ

ಹೊಸದಾಗಿ ಸಂಪಾದಿಸಿಕೊಂಡ ಆಗಾಮಿಕರ್ಮ ಪುನಃ 108 ಕೋಟಿ ಸೆಕೆಂಡುಗಳು ನಡೆಯುವವರೆಗು ಆಗಾಮಿಕವಾಗಿಯೇ ಇದ್ದು, 108 ಕೋಟಿ ಸೆಕೆಂಡುಗಳು ಕಳೆದಾಗ ಕರ್ಮ ಹಗಲು ಎಂದು ಹೆಸರು ಇಡಲಾಗಿದ್ದ ಆ ಸಮಯದಲ್ಲಿ ಸಂಚಿತ ಕರ್ಮವಾಗಿ ಬದಲಾಗಿ ಹೋಗುವುದು. ಆಗಾಮಿಕರ್ಮ ಸಂಚಿತ ಕರ್ಮವಾಗಿ ಬದಲಾಗುವ ಸಮಯವನ್ನು "ಕರ್ಮಹಗಲು" ಎನ್ನುತ್ತಿದ್ದೇವೆ. ಪ್ರತಿ ಜೀವಿಗೆ ಕರ್ಮಹಗಲು 69 ಸಂವತ್ಸರಗಳ 5 ತಿಂಗಳ 10 ದಿನಗಳಿಗೆ ಒಂದು ಭಾರಿ ಬರುವುದು.

ದೇವರು ಪುರುಷ ಚಿಹ್ನೆಯಾಗಿದ್ದು, ಪ್ರಕೃತಿ ಸ್ತ್ರೀ ಚಿಹ್ನೆಯಾಗಿ ಇದೆ. ಹಾಗೆಯೇ ಜೀವಿಯು, ಸ್ತ್ರೀ ಪುರುಷ ಸಮ್ಮೇಳನದಿಂದ ಹುಟ್ಟಿದವನಾಗಿ ನಪುಂಸಕನ ಚಿಹ್ನೆಯಾಗಿ ಇದ್ದಾನೆಂದು ಹೇಳುತ್ತಿದ್ದೇವೆ. ಆ ವಿಧಾನವೇ ಹೊರಗಿನ ಪ್ರಪಂಚದಲ್ಲಿ ಪ್ರತ್ಯಕ್ಷವಾಗಿ ಕಾಣಿಸುವ ಹಾಗೆ ಪುರುಷ ಜನ್ಮ ಶರೀರಗಳು ಇವೆ, ಸ್ತ್ರೀ ಜನ್ಮ ಶರೀರಗಳು ಇವೆ, ನಪುಂಸಕ ಜನ್ಮ ಶರೀರಗಳು ಇವೆ. ಅದೇ ವಿಧವಾಗಿ ದೇವರಿಗೆ ಹಗಲು ರಾತ್ರಿ ಇವೆಯೆಂದು ಹೇಳಿದ ಹಾಗೆ, ಮನುಷ್ಯನಿಗೆ ಸಹ ರಾತ್ರಿ ಹಗಲು ಪ್ರತ್ಯಕ್ಷ ಪ್ರಮಾಣವಾಗಿ ಇರುವಹಾಗೆ ಏರ್ಪಾಟು ಮಾಡಲಾಗಿದೆ. ದೇವರಿಗೆ ಇಲ್ಲದ್ದು ಜೀವಿಗೆ ಇರುವುದು ಕರ್ಮವೇ. ಕರ್ಮವೇ ಎಲ್ಲದಕ್ಕು ಕಾರಣವಾಗಿದೆ. ಆಗಾಮಿಕರ್ಮ ಸಂಚಿತವಾಗಿ ಬದಲಾಗಿ, ಸಂಚಿತದಿಂದ ಪ್ರಾರಬ್ಧವಾಗಿ ಬರುತ್ತಿದೆ. ಸಂಚಿತವು ಪ್ರಾರಬ್ಧವಾಗಿ ಶರೀರ ಬದಲಾಗುವಾಗ ಬರುತ್ತಿದ್ದು, ಆಗಾಮಿಕವು 69 ಸಂ॥ 5 ತಿಂಗಳ, 10ದಿನಗಳಿಗೆ ಒಂದು ಭಾರಿ ಸಂಚಿತವಾಗಿ ಬದಲಾಗುತ್ತಿದೆ. ಆಗಾಮಿಕರ್ಮ ಸಂಚಿತ ಕರ್ಮವಾಗಿ ಬದಲಾಗುವ ಕಾಲವನ್ನು ಕರ್ಮಹಗಲು ಎನ್ನುತ್ತಿದ್ದೇವೆ. ದೇವರಿಗೆ ಸಹಸ್ರಯುಗ ಗಳು ಒಂದು ಹಗಲು, ಹಾಗೆ ಸಹಸ್ರ ಯುಗಗಳು ಒಂದು ರಾತ್ರಿ ಎಂದು ಭಗವದ್ಗೀತೆಯಲ್ಲಿ ಹೇಳಲಾಗಿದೆ. ದೇವರ ಹಗಲಿನಲ್ಲಿ ಪ್ರಪಂಚ ವಿದೆಯೆಂದು, ದೇವರ ರಾತ್ರಿ ಸಮಯದಲ್ಲಿ ಪ್ರಪಂಚ ಇಲ್ಲವೆಂದು ಹೇಳಲಾಗಿದೆ. ದೇವರ ಹಗಲು ರಾತ್ರಿಯನ್ನು ಗುರುತಿಸುವುದಕ್ಕೆ ನಮ್ಮ ತಲೆಯಲ್ಲಿ ನಾಲ್ಕು

ಚಕ್ರಗಳ ಸಮುದಾಯದಲ್ಲಿ ಮೇಲೆ ಬ್ರಹ್ಮ ಚಕ್ರವೆನ್ನುವುದು ಜೋಡಿಸಲ್ಪಟ್ಟಿದೆ ಎಂದು ಹೇಳಿಕೊಂಡಿದ್ದೇವೆ. ಬ್ರಹ್ಮಚಕ್ರ ಎರಡು ಭಾಗಗಳಾಗಿ ವಿಭಜಿಸಿದೆಯೆಂದು ಸಹ ಚಿತ್ರಪಟದಲ್ಲಿ ನೋಡಿದ್ದೇವೆ. ಇದಕ್ಕಿಂತ ಮೊದಲು ಈ ಬ್ರಹ್ಮಚಕ್ರವನ್ನು, ಅದರ ಗಮನವನ್ನು ಕುರಿತು ಹೇಳಿಕೊಂಡರೂ, ಅದರಲ್ಲಿ ಅರ್ಥ ಮಾಡಿಕೊಳ್ಳಬೇಕಾದ ಜ್ಞಾನ ಎಷ್ಟೋ ಇದೆಯೆಂದು, ತಿಳಿದುಕೊಂಡಿರುವುದೆಲ್ಲಾ ಸತ್ಯವೇ ಆದರೂ ನಮಗೆ ಅವಗಾಹನೆಗೆ ಬಂದಿರುವುದು ಸ್ವಲ್ಪ ಶಾತವೆ ಎಂದು ಹೇಳಬಹುದು. ಈಗ ಕಲಿಯುಗವನ್ನು ಕುರಿತು ಹೇಳಿಕೊಳ್ಳುತ್ತಿದ್ದೇವೆ ಆದರೆ ಪ್ರಳಯವನ್ನು ಪ್ರಭವವನ್ನು ಕುರಿತು ಹೇಳಿಕೊಳ್ಳುವುದೆ ಅಲ್ಲದೆ, ಇಲ್ಲಿಯವರೆಗು ಅರ್ಥ ವಾಗದಿರುವುದನ್ನೆಲ್ಲಾ ವಿವರಿಸಿಕೊಳ್ಳೋಣ.

ಈ ವಿಶ್ವವೆಲ್ಲವು ಪ್ರಳಯ ಕಾಲದಲ್ಲಿ ಇಲ್ಲದೆ ಹೋಗುತ್ತದೆಂದು, ವಿಶ್ವವು ಇಲ್ಲದಿರುವಾಗ ಪಂಚಭೂತಗಳು ಇಲ್ಲವೆಂದು, ಆ ಸ್ಥಿತಿ ಹೇಗೆ ಇರುತ್ತದೋ ಯಾರಿಗೂ ತಿಳಿಯದೆಂದು, ಏನು ಇಲ್ಲದ ಸ್ಥಿತಿ ಹೀಗೆ ಇರುತ್ತದೆಂದು ಯಾರೂ ಹೇಳಲಾರರೆಂದು, ಅಂತಹ ಎಲ್ಲಾ ಇಲ್ಲದ ಸ್ಥಿತಿಯಲ್ಲಿಯೂ ಸಹ ದೈವ ಇರುತ್ತಾನೆಂದು, ವಿಶ್ವವಿಲ್ಲದ ಸ್ಥಿತಿಯನ್ನೇ ದೇವರ ರಾತ್ರಿ ಎಂದು ಹೇಳಲಾಗುತ್ತ ದೆಂದು, ಆ ವಿಧವಾಗಿ ಸಾವಿರಯುಗಗಳು ಕಳೆದು ಹೋಗಿ ಪುನಃ ಸಾವಿರ ಯುಗಗಳು ವಿಶ್ವ ಪ್ರಭವವನ್ನು ಹೊಂದಿ ಜೀವಿಸುವುದೆಂದು, ಆ ಕಾಲವನ್ನೇ ದೇವರ ಹಗಲು ಎಂದು ಹೇಳಿಕೊಂಡಿದ್ದೇವೆ. ಇದೆಲ್ಲಾ ಶಾಸ್ತ್ರಬದ್ದವಾಗಿ ನೂರಕ್ಕೆ ನೂರರಷ್ಟು ಸತ್ಯವೇ. ಆದರೆ ಕೆಲವರು ಇಲ್ಲಿ ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! "ಸಾವಿರಯುಗಗಳು ಹಗಲು, ಸಾವಿರಯುಗಗಳು ರಾತ್ರಿ. ಎರಡು ಸಾವಿರ ಯುಗಗಳು ದೇವರಿಗೆ ಒಂದು ದಿನವಾದಾಗ, ದೇವರು ಒಂದು ಲೆಕ್ಕಕ್ಕೆ ಕಟ್ಟುಬಿದ್ದು ಇದ್ದಾನೆಂದು, ಆತನ ಆಯಸ್ಸು ಎಷ್ಟೋ ಯಾರಿಗೂ ತಿಳಿಯದಿದ್ದರು ಆತನ ಜೀವನದಲ್ಲಿ ಎರಡು ಸಾವಿರ ಯುಗಗಳಿಗೆ ಒಂದು ದಿನ ಪೂರ್ತಿಯಾಗಿ ಕಳೆದು ಹೋದಹಾಗೆ ತಾನೆ! ಎಂದು ಪ್ರಶ್ನಿಸಬಹುದು. ಈ ಪ್ರಶ್ನೆ ಬಹಳ ಜನರ ತಲೆಯಲ್ಲಿ ಹುಟ್ಟಿದೆ ಮತ್ತು ಇದು ಹೇತುಬದ್ದವಾದ

ಪ್ರಶ್ನೆ. ಆದ್ದರಿಂದ ಇದರ ಉತ್ತರವನ್ನು ಜಾಗ್ರತೆಯಿಂದ ಗಮನಿಸಬೇಕಾದ ಅವಶ್ಯವಿದೆ.

ದೇವರಿಗೆ ಒಂದು ದಿನ ಕಳೆದರು ಅದು ಆತನ ಆಯುಸ್ಸಿನಲ್ಲಿ ಸ್ವಲ್ಪ ಕಳೆದು ಹೋದಹಾಗೆ ಆಗುತ್ತದೆ. ದೇವರ ಆಯುಸ್ಸು ಎಷ್ಟು ಎಂದು ತಿಳಿಯದಿದ್ದರೂ, ಆತನಿಗೆ ಎಷ್ಟೋ ಸ್ವಲ್ಪ ಆಯುಸ್ಸು ಇದೆಯೆಂದು ಹೇಳಬಹುದು. ಈ ಆಧಾರದಿಂದ ದೇವರಿಗೂ ಸಹ ಆಯುಸ್ಸು ಇದೆಯೆಂದು ಹೇಳುವುದು ಹೇತುಬದ್ಧವೇ ಆಗುತ್ತದೆ. ಆದರೆ ಮೊದಲಿಗೇ ಮೋಸ ಎನ್ನುವ ಹಾಗೆ ದೇವರು ಯಾವುದಕ್ಕೂ ಬದ್ದನಲ್ಲ. ಆದ್ದರಿಂದ ಆತನನ್ನು ಅಬದ್ಧನೆಂದು ಹೇಳಿದ್ದಾರೆ. ದೇವರನ್ನು ಶಾಸ್ತ್ರಬದ್ದವಾಗಿ ನಿರೂಪಿಸಲಾರೆವು. ಆದರೆ ಆತನ ಜ್ಞಾನವು, ಧರ್ಮಗಳು ಎಲ್ಲವೂ ಶಾಸ್ತ್ರಬದ್ದವೆ ಆಗಿರುವವು. ಆತನ ಧರ್ಮವು ಶಾಸ್ತ್ರಬದ್ದವಾದಾಗ ಆತನು ಶಾಸ್ತ್ರಬದ್ದನಾದ ಹಾಗೆ ಅಲ್ಲವೆ! ಎಂದು ಅಂದುಕೊಂಡರೆ ಅದು ತಪ್ಪಾಗುತ್ತದೆ. ದೇವರು ಸ್ವಲ್ಪ ಮಟ್ಟಿಗೆ ಧರ್ಮಬದ್ದನು, ನಂತರ ಆತನು ಧರ್ಮಾತೀತನು. ದೈವ ಧರ್ಮಗಳನ್ನು ದೇವರೇ ತಿಳಿಸಿದ್ದಾನೆ. ಆತನು ತಿಳಿಸಿದ ಧರ್ಮಗಳ ಪ್ರಕಾರ ಆತನ ದೊಡ್ಡತನ ಮಾತ್ರ ತಿಳಿಯುವುದು, ಆದರೆ ಆತನು ತಿಳಿಯುವುದಿಲ್ಲ. ಆದ್ದರಿಂದ ಇಲ್ಲಿಯವರೆಗು ಭೂಮಿಮೇಲೆ ಹುಟ್ಟಿದ ಯಾವ ಮನುಷ್ಯನಾಗಲಿ, ಎಂತಹವನೇ ಆಗಲಿ ದೇವರನ್ನು ಯಾರೂ ನೋಡಿಲ್ಲ. ಯಾರೂ ನೋಡದಿದ್ದಾಗ ದೇವರು ಎನ್ನುವವನು ಇಲ್ಲವೇ ಇಲ್ಲ ಎಂದು ಹೇಳಬಹುದು ಅಲ್ಲವೆ! ಅಂದರೆ ಹಾಗೆ ಹೇಳುವುದಕ್ಕು ಸಹ ಆಗುವುದಿಲ್ಲ. ದೇವರು ಇದ್ದಾನೆನ್ನುವುದಕ್ಕೆ ಎಷ್ಟೋ ಶಾಸ್ತ್ರಬದ್ದತೆ ಇದೆ. ದೇವರ ಧರ್ಮಗಳು ಎಲ್ಲವೂ ದೇವರಿದ್ದಾನೆಂದು ನಿರೂಪಿಸುತ್ತಿವೆ. ಆದರೆ ದೇವರನ್ನು ತೋರಿಸುವುದಿಲ್ಲ. ಆದ್ದರಿಂದ ದೇವರನ್ನು ಕುರಿತು ನಾವು ಒಂದು ವಾಕ್ಯ ಹೇಳಿದ್ದೇವೆ. "ದೇವರು ನಿಜವಾಗಿ ಇಲ್ಲ, ದೇವರು ಅಬದ್ಧವಾಗಿ ಇದ್ದಾನೆ. ಎಂದು ನಾವು ಹೇಳಿದ ಮಾತಿನಲ್ಲಿ ನಿಜವಾಗಿ, ಅಬದ್ಧವಾಗಿ ಎನ್ನುವ ಪದಗಳನ್ನು ತೆಗೆದು ಹಾಕಿದರೆ ದೇವರು ಇಲ್ಲ, ದೇವರು ಇದ್ದಾನೆ ಎಂಬ ಮಾತುಗಳು ಮಾತ್ರ ಉಳಿಯುತ್ತವೆ.

ಈ ಮಾತುಗಳು ಸಹ ವಾಸ್ತವವೇ. ದೇವರು ಇಲ್ಲ ಎನ್ನುವವರಿಗೆ, ದೇವರು ಇದ್ದಾನೆ ಎನ್ನುವವರಿಗೆ, ಇಬ್ಬರಿಗೂ ಈ ಮಾತುಗಳು ಸರಿಹೋಗುತ್ತವೆ. ದೇವರು ಇದ್ದಾನಾ, ಇಲ್ಲಾ? ಎನ್ನುವ ಎರಡು ಮಾತುಗಳಲ್ಲಿ ಯಾವುದು ಸತ್ಯ ಎಂದರೆ ವಿಶೇಷವಾಗಿ ನೋಡಬೇಕಾಗಿರುವವು ನಿಜ, ಅಬದ್ಧ ಎಂಬ ಪದಗಳು. ಈ ಪದಗಳಲ್ಲಿಯೇ ವಿಶೇಷತೆ ಇದೆ. **ಜ** ಎಂದರೆ ಹುಟ್ಟುವುದು ಎಂದು ಅರ್ಥ. **ನಿ** ಎಂದರೆ ಇಲ್ಲ ಎಂದು ಅರ್ಥ. ನಿಜ ಎಂದರೆ ಹುಟ್ಟದವನು ಎಂದು ಅರ್ಥ. ಇದೇ ಮಾತನ್ನೇ ಗೀತೆಯಲ್ಲಿ ಜ್ಞಾನಯೋಗದಲ್ಲಿ ಆರನೇ ಶ್ಲೋಕದಲ್ಲಿ **"ಅಜೋಪಿ"** ಹುಟ್ಟು ಇಲ್ಲದವನು ಎಂದು ಹೇಳಲಾಗಿದೆ. ಹಾಗೆ ಅಬದ್ಧ ಎನ್ನುವ ಪದದಲ್ಲಿ "ಬದ್ಧ" ಎಂದರೆ ಬಂದಿಸಲ್ಪಟ್ಟು ಇರುವುದೆಂದು ಅರ್ಥ. "ಅಬದ್ಧ" ಎಂದರೆ ಯಾವುದಕ್ಕು ಬಂದಿಸಲ್ಪಡದ ಎಂದು ಅಥವಾ ಯಾವುದರಿಂದಲೂ ಬಂಧಿತವಾಗಿ ರುವುದಿಲ್ಲ ಎಂದು ಅರ್ಥ. ಇದನ್ನು ಅನುಸರಿಸಿ ಹೇಳುವುದಾದರೆ ದೇವರು ಹುಟ್ಟಲಿಲ್ಲ, ದೇವರು ಯಾವುದಕ್ಕು ಬಂಧಿತನಾಗಿಲ್ಲ ಎಂದು ಹೇಳಬಹುದು.

ದೇವರು ಹುಟ್ಟದಿರುವಾಗ ಆತನಿಗೆ ಆಯುಷ್ಷಿದೆ ಎಂದು ಹೇಳುವುದು ಸತ್ಯವು ಅಲ್ಲ ಅಲ್ಲವೆ! ಹಾಗೆ "ನವ್ಯಯಾತ್ಮ" ಎಂದು ಶ್ಲೋಕದಲ್ಲಿ ಹೇಳಿದ ಹಾಗೆ ಆತನಿಗೆ ಮರಣವು ಸಹ ಇಲ್ಲ. ಆದ್ದರಿಂದ ಹುಟ್ಟುಸಾವುಗಳು ಇಲ್ಲದ ದೇವರಿಗೆ ಹಗಲು ರಾತ್ರಿಯನ್ನು ಆಯುಷ್ಷನ್ನು ನಿರ್ಣಯಿಸುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಹಗಲು ರಾತ್ರಿ ಜೀವಾತ್ಮನನ್ನು ಕುರಿತು ಹೇಳಿರುವವೆಂದು, ಅವು ದೇವರಿಗೆ ಅನ್ವಯಿಸುವುದಿಲ್ಲವೆಂದು ತಿಳಿಯಬೇಕು. ಸ್ಥೂಲವಾಗಿ ಜೀವಾತ್ಮನಿಗೆ ಅನ್ವಯಿಸುವ ವಿಷಯಗಳನ್ನೇ ಸೂಕ್ಷ್ಮವಾಗಿ ದೇವರ ವಿಧಾನದಲ್ಲಿ ಹೇಳಲಾಗಿದೆ. ಉದಾಹರಣೆಗೆ ಪ್ರಕೃತಿ ಪರಮಾತ್ಮರು ಪತಿ ಸತಿಗಳಾಗಿ ಇದ್ದಾರೆಂದು ಹೇಳುತ್ತಿದ್ದೇವೆ. ಆದರೆ ಆ ವಿಷಯವು ಸೂಕ್ಷ್ಮವಾಗಿ ಜ್ಞಾನ ಸಮಾಚಾರವಾಗಿ ಇದೆ. ಅದೇ ವಿಷಯವೇ ಸ್ಥೂಲವಾಗಿ ಒಬ್ಬ ಪುರುಷನು, ಒಬ್ಬ ಸ್ತ್ರೀ ಸತಿ ಪತಿಗಳಾಗಿ ಇರುವುದು ಕಾಣಿಸುತ್ತಿದೆ. ಪ್ರಕೃತಿ ಪುರುಷರಿಗೆ ಜೀವಿಗಳು

ಸಂತತಿಯಾಗಿ ಇದ್ದಾರೆಂದು ಹೇಳುವುದು ಸೂಕ್ಷ್ಮವಾಗಿ ಇರುವ ಜ್ಞಾನ ಸಮಾಚಾರವೇ ಅಲ್ಲದೆ, ಅದೇ ಸಮಾಚಾರ ಪ್ರತ್ಯಕ್ಷವಾಗಿ ಸ್ಥೂಲವಾಗಿ ಭೂಮಿ ಮೇಲೆ ಎಲ್ಲರಿಗೂ ತಿಳಿಯುವ ಹಾಗೆ ಇದೆ. ಪ್ರಕೃತಿ ಒಂದೇ, ದೇವರು ಒಬ್ಬನೇ, ಅವರಿಗೆ ಹುಟ್ಟಿದ ಜೀವಿಗಳು ಅನೇಕ (ಒಂದು ಅಲ್ಲ). ಅದೇ ವಿಧವಾಗಿ ತಾಯಿ ಒಬ್ಬಳೇ, ತಂದೆ ಒಬ್ಬನೇ, ಆ ಜೋಡಿಗೆ ಹುಟ್ಟಿದ ಮಕ್ಕಳು ಬಹಳ ಜನ ಎಂದು ಹೊರಗಿನ ಪ್ರಪಂಚದಲ್ಲಿ ಪ್ರತ್ಯಕ್ಷವಾಗಿ ಕಾಣಿಸುತ್ತಿದೆ. ಈ ವಿಧವಾಗಿ ಕೆಲವು ದೇವರನ್ನು ಉದ್ದೇಶಿಸಿ ಹೇಳಿದ ಜ್ಞಾನ ವಿಷಯಗಳು ಎಲ್ಲರಿಗೂ ಅರ್ಥವಾಗುವಹಾಗೆ ಪ್ರತ್ಯಕ್ಷವಾಗಿ ಇವೆಯೆಂದು, ಅವುಗಳನ್ನು ಯಾರೂ ಅಲ್ಲವೆನ್ನಲಾರರು. ಈಗ ಅಸಲು ವಿಷಯಕ್ಕೆ ಬರೋಣ. ಸಾವಿರ ಯುಗಗಳು ದೇವರಿಗೆ ಒಂದು ಹಗಲು, ಸಾವಿರಯುಗಗಳು ಒಂದು ರಾತ್ರಿಯೆಂದು ಭಗವಂತ (ದೇವರ) ನಿಂದಲೇ ತಿಳಿದು ಬಂದಿದೆ, ಹಾಗೆ ದೇವರ ಹಗಲು ಸಮಯದಲ್ಲಿ ಪ್ರಪಂಚವಿದೆಯೆಂದು, ಪ್ರಪಂಚ ಸೃಷ್ಟಿಸಲ್ಪಡುತ್ತದೆಂದು, ದೇವರ ರಾತ್ರಿ ಸಮಯದಲ್ಲಿ ಪ್ರಪಂಚ ಇಲ್ಲವೆಂದು, ಎಲ್ಲಾ ಪ್ರಳಯ ಹೊಂದುತ್ತಿದೆಯೆಂದು, ಭಗವಂತನಿಂದಲೇ ತಿಳಿದುಬಂದಿದೆ. ಇಲ್ಲಿ ಮುಖ್ಯವಾಗಿ ಎಲ್ಲರು ಗಮನಿಸಬೇಕಾದ ವಿಷಯವೇನೆಂದರೆ!

ದೇವರ ಹಗಲು, ರಾತ್ರಿ ಎಂದು ಹೇಳಿದಹಾಗೆ, ಜೀವಿಗೂ ಸಹ ಹಗಲು ರಾತ್ರಿ ಪ್ರತ್ಯಕ್ಷವಾಗಿ ಇವೆ. ದೇವರ ಹಗಲು ಕಾಲದಲ್ಲಿ ಪ್ರಪಂಚ ಇದ್ದಹಾಗೆ, ಜೀವಾತ್ಮನ ಹಗಲು ಕಾಲದಲ್ಲಿ ಪ್ರಪಂಚವಿದೆ. ದೇವರ ರಾತ್ರಿ ಕಾಲದಲ್ಲಿ ಪ್ರಪಂಚ ಇಲ್ಲವೆಂದು ಹೇಳಿದ ಹಾಗೆ ಜೀವಾತ್ಮನಿಗು ಸಹ ರಾತ್ರಿ ಸಮಯದಲ್ಲಿ (ನಿದ್ರೆಯಲ್ಲಿ) ಪ್ರಪಂಚ ಇಲ್ಲ. ಜೀವಿಗೆ ಹಗಲು ಸಮಯವಾದ ಎಚ್ಚರದಲ್ಲಿ ಜೀವಿಯು ಇದ್ದಾನೆ, ಆತನೊಂದಿಗೆ ಪ್ರಪಂಚವೂ ಇದೆ. ಆದರೆ ಜೀವಿಯ ರಾತ್ರಿ ಸಮಯವಾದ ನಿದ್ರೆಯಲ್ಲಿ ಜೀವಿಗೆ ತಿಳಿದು ಜೀವಿಯು ಇಲ್ಲ, ಜೀವಿಯು ತಿಳಿದುಕೊಳ್ಳುವ ಪ್ರಪಂಚವೂ ಇಲ್ಲ. ಜೀವಿಯು ರಾತ್ರಿ ಸಮಯದಲ್ಲಿ (ನಿದ್ರೆಯಲ್ಲಿ) ಜೀವಿಯು, ಪ್ರಪಂಚವೂ, ಎಲ್ಲ ಇದ್ದರೂ ಅವನಿಗೆ ಮಾತ್ರ ತಿಳಿಯದೆ ಹೋಗುತ್ತಿವೆ.

ಪ್ರಪಂಚವೂ, ಜೀವಿಯು, ಆತ್ಮ ಎಲ್ಲಾ ಇದ್ದರೂ ಜೀವಿಗೆ ತಿಳಿದಹಾಗೆ ಜೀವಿಯಾಗಲಿ, ಪ್ರಪಂಚವಾಗಲಿ ತಿಳಿಯದೆ ಹೋಗುತ್ತಿವೆ. ಆದ್ದರಿಂದ ಆ ಸಮಯವನ್ನು ಆ ಜೀವಿಗೆ ಇರುವವೆಲ್ಲ ಇಲ್ಲದೆ ಹೋಗಿವೆಯೆಂದು, ಎಲ್ಲ ಪ್ರಳಯಹೊಂದಿ ಹೋಗಿವೆಯೆಂದು ಹೇಳಬಹುದು. ಪ್ರಳಯ ಎಂದರೆ ಹುಟ್ಟಿರುವವೆಲ್ಲ ಇಲ್ಲದೆ ಹೋಗುವುದು ಎಂದು ಅರ್ಥವಾಗುವುದರಿಂದ ಜೀವಾತ್ಮನ ರಾತ್ರಿ ಸಮಯವನ್ನು ಪ್ರಳಯವೆಂದೇ ಹೇಳಬಹುದು. ಪ್ರಳಯ ಎಂದರೆ ಭೂಮಿ ಚೂರು ಚೂರು ಆಗುತ್ತದೆಂದು, ಅಗ್ನಿ ಸಿಡಿದು ಹೋಗುತ್ತ ದೆಂದು, ಸಮುದ್ರ ಭೂಮಿ ಮೇಲೆ ದೊಡ್ಡ ಅಲೆಗಳಾಗಿ ಬಂದು (ಸುನಾಮಿಯಾಗಿ ಬಂದು) ಪ್ರಜೆಗಳನ್ನು ಸಾಯಿಸುತ್ತದೆಂದು, ಸುಂಟರಗಾಳಿ ಎಲ್ಲವನ್ನು ನಾಶ ಮಾಡುತ್ತದೆಂದು ಅಂದುಕೊಳ್ಳಬಾರದು. ಈ ವಿಧವಾಗಿ ನಡೆಯುವುದು ಪ್ರಳಯ ಅಲ್ಲ. ಮನುಷ್ಯನಿಗೆ ಹಗಲು ಕಾಲದಲ್ಲಿ (ಮನುಷ್ಯನಿಗೆ ಎಚ್ಚರ ಕಾಲದಲ್ಲಿ) ಜೀವಿಗೆ (ಮನುಷ್ಯನಿಗೆ) ತಿಳಿಯುವ ಹಾಗೆ ನಡೆಯುವ ಪ್ರಕೃತಿ ವಿಕೋಪ ಪ್ರಳಯಗಳು ಅಲ್ಲ. ಮನುಷ್ಯನಿಗೆ ಪ್ರಕೃತಿ ಎಲ್ಲವೂ ಇಲ್ಲದೆ ಹೋಗುವುದು, ಹಾಗೆಯೇ ತಾನು ಸಹ ಇಲ್ಲದೆ ಹೋಗುವುದು ಪ್ರಳಯವಾಗುತ್ತದೆ. ತನಗೆ (ಜೀವಿಗೆ) ತಿಳಿದುಬರುವ ಪ್ರಕೃತಿ ಎಲ್ಲವೂ ಇಲ್ಲದೆ ಹೋಗುವುದನ್ನು ಪ್ರಳಯ ಎನ್ನುತ್ತೇವೆ. ಜೀವಿಗೆ ತಿಳಿಯದೆ ಹೋಗಿರುವುದೆಲ್ಲಾ ಮತ್ತೆ ತಿಳಿಯುವು ದನ್ನು ಪ್ರಭವ ಎನ್ನುತ್ತೇವೆ. ಎಲ್ಲರೂ ಪ್ರಳಯಗಳಾಗಿ ಊಹಿಸಿಕೊಳ್ಳುವ ಪ್ರಕೃತಿ ವಿಕೋಪಗಳೆಲ್ಲವು ಮನುಷ್ಯ ಜೀವಿಸಿ ಇರುವ ಸಮಯದಲ್ಲಿಯೇ ನಡೆಯುತ್ತಿವೆ. ಪ್ರಕೃತಿ ಉದ್ರೇಕದಿಂದ ನಡೆಯುವ ಭೂಕಂಪಗಳು, ಸುನಾಮಿಗಳು, ಅಗ್ನಿ ಸಿಡಿದು ಭೂಮಿ ಮೇಲಿರುವ ಜೀವರಾಶಿಗಳು ಸುಡುವುದು, ಸುಳಿಗಾಳಿಯ ಬೀಕರತೆ ಎಲ್ಲ ಮನುಷ್ಯನನ್ನು ಹಿಂಸಿಸುವುದಕ್ಕಾಗಿಯೇ ಹೊರತು ಅವು ಇಲ್ಲದೆ ಹೋಗುವುದಕ್ಕಲ್ಲ. **ಪ್ರಕೃತಿ ಮನುಷ್ಯನ ದೃಷ್ಠಿಯಲ್ಲಿ ಇಲ್ಲದೆ ಹೋಗುವುದನ್ನು ಪ್ರಳಯವೆಂದು, ಪ್ರಕೃತಿ ಮನುಷ್ಯನ ದೃಷ್ಠಿಯೊಳಗೆ ಬರುವುದನ್ನು ಪ್ರಭವವೆಂದು ಹೇಳಬಹುದು.** ಇಲ್ಲಿ ಚೆನ್ನಾಗಿ ಜ್ಞಾಪಕ ಇಟ್ಟುಕೊಳ್ಳಬೇಕಾದ ವಿಷಯವೇನೆಂದರೆ! ಮನುಷ್ಯ (ಜೀವಿಯು) ತನಗೆ ತಾನು ತಿಳಿಯದೆ ಹೋದಾಗ, ತನಗೆ

ತಿಳಿದಿರುವವೆಲ್ಲಾ ಇಲ್ಲದೆ ಹೋಗುವುದನ್ನು ಪ್ರಳಯ ಎನ್ನುತ್ತಿದ್ದೇವೆ. ಮನುಷ್ಯ ತನಗೆ ತಾನು ತಿಳಿದುಕೊಂಡಾಗ, ಅಲ್ಲಿಯವರೆಗು ತನಗೆ ತಿಳಿಯದೆ ಹೋಗಿರುವವೆಲ್ಲ ಪುನಃ ತಿಳಿದು ಬರುವುದನ್ನು ಪ್ರಭವವೆಂದು ಅನ್ನುತ್ತಿದ್ದೇವೆ.

ಇಲ್ಲಿ ಪ್ರಳಯ ವಿಷಯದಲ್ಲಿ ಮನುಷ್ಯರೆಲ್ಲರೂ ಬಹಳ ತಪ್ಪಾಗಿ ಅರ್ಥೈಯಿಸಿಕೊಂಡಿದ್ದಾರೆ. ಹಾಗೆ ಪ್ರಭವ ಎಂಬ ವಿಷಯದಲ್ಲಿ ಸಹ ತಪ್ಪಾಗಿ ಅರ್ಥೈಯಿಸಿಕೊಂಡಿದ್ದಾರೆ. ಸತ್ಯವನ್ನು ತಿಳಿದುಕೊಂಡರೆ ಎಲ್ಲ ಸಮಯಗಳಲ್ಲಿಯೂ ಹಗಲಾಗಲಿ, ರಾತ್ರಿಯಾಗಲಿ ಯಾವುದೋ ಒಂದು ನಡೆಯುತ್ತಿದೆ. ಹಗಲು ಸಮಯದಲ್ಲಿ ಎಚ್ಚರ ರಾತ್ರಿ ಸಮಯದಲ್ಲಿ ನಿದ್ರೆ ಎನ್ನುವವು ನಿರ್ಣಯವಾಗಿವೆ. ಎಚ್ಚರ ನಿದ್ರೆ ಎರಡು ಮನಸ್ಸನ್ನು ಅನುಸರಿಸಿ ಇರುವವು. ಮನಸ್ಸು ಅಡಗಿ ಹೋದರೆ ಅದು ಮನುಷ್ಯನಿಗೆ ರಾತ್ರಿಯಾಗಿ, ಮನಸ್ಸು ಅಡಗಿ ಹೋಗದೆ ಕೆಲಸ ಮಾಡುತ್ತಿರುವಾಗ ಆ ಸಮಯವನ್ನು ಹಗಲೆಂದು ಲೆಕ್ಕಿಸಿ ಹೇಳಬಹುದು. ಶರೀರದೊಳಗಿನ ಮನಸ್ಸು ಹೊರಗಿನ ಪ್ರಪಂಚ ವಿಷಯಗಳನ್ನು ಗ್ರಹಿಸಿದಾಗ, ಹೊರಗೆ ಇರುವ ಪ್ರಕೃತಿಯಲ್ಲಿನ ಪಂಚಭೂತಗಳು ಜೀವಾತ್ಮನಿಗೆ ತಿಳಿದುಬರುತ್ತಿವೆ. ಶರೀರದೊಳಗಿನ ಜೀವಿಯು ತನ್ನ ಮನಸ್ಸಿನಿಂದ ಹೊರಗಿರುವ ಪಂಚ ಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯನ್ನು ಗ್ರಹಿಸುತ್ತಾನೆ. ಶರೀರದ ಹೊರಗಿರುವ ಪಂಚಭೂತಗಳು ಶರೀರದೊಳಗಿರುವ ಜೀವಿಯು ಬೇರೆಬೇರೆಯಾಗಿ ಇವೆ. ಶರೀರದ ಒಳಗಿರುವ ಜೀವಿಗೆ ಹೊರಗಿರುವ ಪ್ರಪಂಚ ಹಗಲು ಕಾಲದಲ್ಲಿ ತಿಳಿದುಬರುತ್ತದೆ, ರಾತ್ರಿ ಕಾಲದಲ್ಲಿ ತಿಳಿದುಬರುವುದಿಲ್ಲ ಎಂದು ಯಾರಾದರೂ ಹೇಳಬಹುದು. ಶರೀರದಲ್ಲಿನ ಜೀವಿಗೆ ಹಗಲು ಕಾಲದಲ್ಲಿ ಪ್ರಕೃತಿ ಹೇಗೆ ಇದೆಯೋ, ಹಾಗೆಯೇ ರಾತ್ರಿ ಕಾಲದಲ್ಲಿ ಪ್ರಕೃತಿ ಜೀವಿಗೆ ತಿಳಿಯದಿದ್ದರೂ, ಪ್ರಕೃತಿ ಮಾತ್ರ ಹಗಲು ಕಾಲದಲ್ಲಿ ಹೇಗಿದೆಯೋ ರಾತ್ರಿಕಾಲದಲ್ಲಿ ಸಹ ಹಾಗೆಯೇ ಇದೆ. ಹಗಲು ರಾತ್ರಿ ಎನ್ನುವವು ಶರೀರದಲ್ಲಿ ಜೀವಿಗೆ ಮಾತ್ರವೆ ಆಗಲಿ, ಹೊರಗಿನ ಪ್ರಪಂಚಕ್ಕೆ ಅಲ್ಲ. ಪ್ರಕೃತಿಗೆ ರಾತ್ರಿ ಹಗಲು ಎನ್ನುವವು ಅನ್ವಯಿಸುವುದಿಲ್ಲ. ರಾತ್ರಿ ಹಗಲು ಜೀವಿಗೆ ಮಾತ್ರ ಅನ್ವಯಿಸುತ್ತದೆ. ಹಗಲಿನಲ್ಲಿರುವ

ಜ್ಞಾಪಕ ರಾತ್ರಿ ಹೊತ್ತಿನಲ್ಲಿ ಶರೀರದಲ್ಲಿ ಇಲ್ಲವಾದ್ದರಿಂದ ಮನುಷ್ಯ ತನ್ನನ್ನು ತಾನು ಮರೆತು ಹೋಗುತ್ತಿದ್ದಾನೆ. ನಿದ್ರೆಯಲ್ಲಿ ತನಗೆ ಯಾವುದೇ ಜ್ಞಾಪಕ ಇಲ್ಲವಾದ್ದರಿಂದ ಜೀವಿಗೆ ತಾನು ಇದ್ದಹಾಗೆ ಆಗಲಿ, ಹೊರಗೆ ಪ್ರಪಂಚ ಇದ್ದಹಾಗೆ ಆಗಲಿ ಯಾವುದೂ ತಿಳಿದಿಲ್ಲ. ಆಗ ಎಚ್ಚರದಲ್ಲಿ ಇರುವವೆಲ್ಲ ಇಲ್ಲದೇ ಹೋಗುವುದನ್ನು ಪ್ರಳಯ ಎನ್ನುತ್ತಿದ್ದೇವೆ. ಯಾವಾಗಾದರೆ ಇರುವವೆಲ್ಲಾ ಪುನಃ ತಿಳಿದುಬರುತ್ತವೊ, ಆ ಸಮಯವನ್ನು ಪ್ರಭವ ಎನ್ನುತ್ತಿದ್ದೇವೆ. ಪ್ರಳಯದಲ್ಲಾಗಲಿ, ಪ್ರಭವದಲ್ಲಾಗಲಿ ಪ್ರಪಂಚ ಹೇಗಿದೆಯೊ ಹಾಗೇ ಇದೆ. ಅಷ್ಟೇ ಆಗಲಿ ಪ್ರಭವದಲ್ಲಿರುವ ಪ್ರಕೃತಿ ಪ್ರಳಯದಲ್ಲಿ ಸ್ಥೂಲವಾಗಿ ನಾಶ ಹೊಂದುತ್ತದೆಂದು, ನಾಶವಾಗಿ ಹೋದ ಪ್ರಕೃತಿ ಪ್ರಭವದಲ್ಲಿ ಪುನಃ ದೇವರಿಂದ ತಯಾರು ಮಾಡಲಾಗುತ್ತದೆಂದು ಅಂದುಕೊಳ್ಳಬಾರದು.

ಜೀವಿಗೆ ಎಚ್ಚರ ಸಮಯ ಹಗಲು, ಜೀವಿಗೆ ನಿದ್ರೆ ಸಮಯ ರಾತ್ರಿಯೆಂದು ಹೇಳಿಕೊಂಡಾಗ, ಜೀವಿಯ ಹಗಲು ಸಮಯದಲ್ಲಿ ಹೊರಗೆ ಪ್ರಪಂಚವೆಲ್ಲಾ ವ್ಯಕ್ತವಾಗಿ ಇದೆ. ಹಾಗೆ ರಾತ್ರಿ ಸಮಯದಲ್ಲಿ ಹಗಲು ವ್ಯಕ್ತವಾಗಿರುವ ಪ್ರಪಂಚವೆಲ್ಲಾ ಅವ್ಯಕ್ತವಾಗಿ ಬದಲಾಗುತ್ತದೆ. ವ್ಯಕ್ತವನ್ನು (ತಿಳಿದುಬರುವುದನ್ನು) ಪ್ರಭವವೆಂದು, ಅವ್ಯಕ್ತವನ್ನು (ತಿಳಿಯದೆ ಹೋಗುವುದನ್ನು) ಪ್ರಳಯ ಎನ್ನುತ್ತಿದ್ದೇವೆ. ಪ್ರಳಯ ಸಮಯದಲ್ಲಿ ಜೀವಿಗೆ ಪ್ರಪಂಚ ತಿಳಿಯದಿರುವುದು ಹೊರತು, ಸ್ಥೂಲವಾಗಿ ಎಂತಹ ನಾಶ ಆಗುವುದಿಲ್ಲ. ನಾವು ನೋಡುತ್ತಿದ್ದಹಾಗೆ ಸಮುದ್ರದಲ್ಲಿ ಸುನಾಮಿಗಳು, ಭೂಮಿಯಲ್ಲಿ ಕಂಪನಗಳು, ಗಾಳಿಯಲ್ಲಿ ಸುಳಿಗಳು, ಅಗ್ನಿಯಲ್ಲಿ ಸ್ಫೋಟಕಗಳು ಎಷ್ಟು ಸಂಭವಿಸಿದರೂ ನೀರಾಗಲಿ, ಭೂಮಿಯಾಗಲಿ, ಗಾಳಿಯಾಗಲಿ, ಅಗ್ನಿಯಾಗಲಿ, ಯಾವುದು ನಾಶವಾಗಿ ಹೋಗಲಿಲ್ಲ. **ಪ್ರಕೃತಿಯ ವೊಂದು ಪಂಚಭೂತಗಳ ವಿಕೋಪ ಎಷ್ಟು ನಡೆದರೂ ಅವುಗಳಿಂದ ಮನುಷ್ಯ ಹಿಂಸೆಯನ್ನು ಅನುಭವಿಸುತ್ತಿದ್ದಾನಾಗಲಿ, ಅವು ಮಾತ್ರ ಯಾವೊಂದು ನಾಶವಾಗಲಿಲ್ಲವೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.** ಪ್ರಕೃತಿಗೆ ನಾಶವೆನ್ನುವುದು ಇಲ್ಲ. ಆದ್ದರಿಂದ ಸಾವಿರಯುಗಗಳು ಕಳೆದ ನಂತರ ಅಥವಾ ಕಲಿಯುಗ

250 ಬಾರಿ ಕಳೆದ ನಂತರ 250ನೇ ಬಾರಿ ಕೊನೆಯಲ್ಲಿ ಬರುವ ಕಲಿಯುಗ ದಿಂದಲೇ ಪ್ರಳಯ ಬರುತ್ತದೆಂದು ಅಂದುಕೊಳ್ಳುವುದು ತಪ್ಪಾಗುತ್ತದೆ, ಅಜ್ಞಾನ ವಾಗುತ್ತದೆ, ಪ್ರಕೃತಿ ನಾಶವಾಗುವುದು ಅಸಂಭವ. ಪ್ರಕೃತಿ ಪ್ರಳಯದಲ್ಲಿ ಅವ್ಯಕ್ತವೂ, ಪ್ರಭವದಲ್ಲಿ ವ್ಯಕ್ತವಾಗುವುದು ಮಾತ್ರ ಸಂಭವ. ಇದೇ ವಿಷಯವನ್ನು ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗ 17, 18, 19 ಶ್ಲೋಕಗಳಲ್ಲಿ ಹೀಗೆ ಹೇಳಲಾಗಿದೆ.

**17) ಶ್ಲೋ॥ ಸಹಸ್ರಯುಗಪರ್ಯನ್ತ ಮಹಾರ್ಯದ್ ಬ್ರಹ್ಮಣೋವಿದುಃ।**
**ರಾತ್ರಿಂ ಯುಗ ಸಹಸ್ರಾನ್ತಾಂ ತೇಹೋ ರಾತ್ರವಿದೋ ಜನಾಃ॥**

**ಭಾವಾರ್ಥ:–** ಸಾವಿರ ಯುಗಗಳು ಒಂದು ಹಗಲೆಂದು, ಹಾಗೆ ಸಾವಿರ ಯುಗಗಳು ಒಂದು ರಾತ್ರಿಯೆಂದು ದೊಡ್ಡವನಾದ ದೇವರಿಗೆ ಲೆಕ್ಕಿಸಲಾಗಿದೆ ಯೆಂದು ಯಾವ ಜನಗಳಾದರೆ ತಿಳಿದುಕೊಳ್ಳುತ್ತಾರೋ ಅಂತಹವರು ತನ್ನ ರಾತ್ರಿಯನ್ನು ಹಗಲನ್ನು ತಿಳಿಯಬಲ್ಲರು.

**18) ಶ್ಲೋ॥ ಅವ್ಯಕ್ತಾದ್ ವ್ಯಕ್ತಯಃ ಸರ್ವಾಃ ಪ್ರಭವನ್ತ್ಯಹರಾಗಮೇ।**
**ರಾತ್ರ್ಯಾಗಮೇ ಪ್ರಲೀಯನ್ತೇ ತತ್ರೈವಾ ವ್ಯಕ್ತ ಸಂಜ್ಞಕೇ॥**

**ಭಾವಾರ್ಥ:–** ಹಗಲು ರಾತ್ರಿಯನ್ನು ಕುರಿತು ತಿಳಿದವರಿಗೆ ಹಗಲು ಕಾಲದಲ್ಲಿ ಸಮಸ್ತ ಪ್ರಪಂಚವು ವ್ಯಕ್ತವಾಗುವ ಹಾಗೆ ತಿಳಿಯುತ್ತಿದೆ. ಹಾಗೆ ರಾತ್ರಿ ಕಾಲದಲ್ಲಿ ವ್ಯಕ್ತವಾಗುತ್ತಿರುವ ಪ್ರಪಂಚವೆಲ್ಲವೂ ಅವ್ಯಕ್ತವಾಗುವ ಹಾಗೆ ತಿಳಿಯುತ್ತದೆ. ಪ್ರಪಂಚದ ವ್ಯಕ್ತಾವ್ಯಕ್ತಗಳು ಜೀವಿಯ ರಾತ್ರಿ ಹಗಲುಗಳನ್ನು ಅನುಸರಿಸಿ ಏರ್ಪಡುತ್ತವೆ.

**19) ಶ್ಲೋ॥ ಭೂತಗ್ರಾಮಃಸ ಏವಾಯುಂ ಭೂತ್ವಾಭೂತ್ವಾ ಪ್ರಲೀಯತೇ,**
**ರಾತ್ರ್ಯಾಗಮೇ ವಶಃ ಪಾರ್ಥ! ಪ್ರಭವ ತ್ಯಹರಾಗಮೇ.**

**ಭಾವಾರ್ಥ:–** ಸಕಲ ಜೀವರಾಶಿಗಳು ಹಗಲು ಜೀವಿಸುತ್ತವೆ, ರಾತ್ರಿ ಆದ ತಕ್ಷಣವೇ ಪ್ರಳಯವನ್ನು ಹೊಂದುತ್ತವೆ. ಪುನಃ ಹಗಲಾದ ತಕ್ಷಣವೇ ಪ್ರಭವವನ್ನು ಹೊಂದುತ್ತಿವೆ. ಈ ವಿಧವಾಗಿ ಸಕಲ ಜೀವರಾಶಿಗಳು ಪ್ರಳಯ ಪ್ರಭವಗಳನ್ನು ಹೊಂದುತ್ತಿವೆ. ಹೀಗೆ ರಾತ್ರಿ ಹಗಲುಗಳು ಪ್ರಳಯವನ್ನೂ, ಪ್ರಭವವನ್ನೂ ಕರ್ಮವಶದಲ್ಲಿ ಸಕಲ ಜೀವಗಳು ಹೊಂದುತ್ತಿವೆ.

ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೆ! ಮನುಷ್ಯ ಹಗಲು ಎಚ್ಚರದಲ್ಲಿ ರಾತ್ರಿ ನಿದ್ರೆಯಲ್ಲಿ ಇರುವುದು ಸಹಜವೆ. ಆದರೂ, ಕೆಲವರು ಮಾತ್ರ ರಾತ್ರಿ ಸಮಯದಲ್ಲಿ ಬಹಳಕಾಲ ಎಚ್ಚರದಲ್ಲಿದ್ದು ಕೆಲಸವನ್ನು ಮಾಡುತ್ತಿರುತ್ತಾರೆ. ಆಗ ಅವರು ಎಚ್ಚರದಲ್ಲಿದ್ದಾರೆ. ಆದರೆ ಆ ಸಮಯವನ್ನು ರಾತ್ರಿಯಾಗಿ ಲೆಕ್ಕಿಸಿಕೊಳ್ಳಬೇಕಾ? ಅಥವಾ ಹಗಲು ಕೆಳಗೆ ಜಮ ಮಾಡಿಕೊಳ್ಳಬೇಕಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ದೇವರ ರಾತ್ರಿ ಹಗಲು ವಿಧಾನವೆಲ್ಲಾ ಯಾರು ತಿಳಿದುಕೊಳ್ಳುವರೊ ಅವರಿಗೆ ಅವನ ರಾತ್ರಿಹಗಲು ವಿವರವೆಲ್ಲಾ ತಿಳಿಯುವುದೆಂದು ನಾಶವಿಲ್ಲದ ದೇವರ ಯೋಗವೆನ್ನುವ ಈ ಅಧ್ಯಾಯದಲ್ಲಿ 17ನೇ ಶ್ಲೋಕದಲ್ಲಿ ಹೇಳಲಾಗಿದೆ, ನಂತರ 18ನೇ ಶ್ಲೋಕದಲ್ಲಿ ಹೇಳಿದಹಾಗೆ ಹಗಲು ಪ್ರಪಂಚ ವ್ಯಕ್ತವಾಗುತ್ತದೆ, ರಾತ್ರಿ ಪ್ರಪಂಚ ಅವ್ಯಕ್ತವಾಗುತ್ತದೆ. ವ್ಯಕ್ತ ಎಂದರೆ ಎಚ್ಚರದಲ್ಲಿರುವಾಗ ಎಂದು ತಿಳಿಯುತ್ತಿದೆ. ಅವ್ಯಕ್ತವೆಂದರೆ ನಿದ್ರೆಹೋಗುವಾಗ ತಿಳಿಯದಿರುವುದು ಎಂದು ಅರ್ಥ. ಈ ಸೂತ್ರದ ಪ್ರಕಾರ ಮನುಷ್ಯ ಎಷ್ಟು ಸಮಯ ಎಚ್ಚರದಲ್ಲಿ ರುತ್ತಾನೋ, ಅದನ್ನು ಪ್ರಪಂಚ ವ್ಯಕ್ತವಾಗುವ ಹಗಲು ಎಂದು ಅವನಿಗೆ ಲೆಕ್ಕಿಸಬೇಕು. ಹಾಗೆ ಒಬ್ಬ ಮನುಷ್ಯ ಎಷ್ಟುಕಾಲ ನಿದ್ರೆ ಹೋಗಿದ್ದಾನೊ, ಆ ಸಮಯದಲ್ಲಿ ಪ್ರಪಂಚ ಅವ್ಯಕ್ತವಾಗಿ ಇರುವುದು. ಆದ್ದರಿಂದ ನಿದ್ರೆ ಹೋದ ಸಮಯವನ್ನೆಲ್ಲಾ ರಾತ್ರಿಯೆಂದೇ ಲೆಕ್ಕಿಸಬೇಕು. ಒಬ್ಬ ಮನುಷ್ಯ ಹೊರಗೆ ಕಾಣಿಸುವ ರಾತ್ರಿಯಲ್ಲಿ ಎಚ್ಚರದಲ್ಲಿದ್ದರೂ ಅದು ಅವನ ಲೆಕ್ಕದಲ್ಲಿ ಹಗಲೆಂದು ಲೆಕ್ಕಿಸಲಾಗುತ್ತದೆ.

ಹಾಗೆ ಒಬ್ಬ ಮನುಷ್ಯ ಹೊರಗೆ ಎಲ್ಲರಿಗೂ ತಿಳಿಯುವ ಹಗಲಿನಲ್ಲಿ ನಿದ್ರೆ ಹೋದರೂ ಅದು ಅವನ ಲೆಕ್ಕದಲ್ಲಿ ರಾತ್ರಿಯೆಂದೇ ಲೆಕ್ಕಿಸಲಾಗುತ್ತದೆ. ದೇವರ ಹಗಲು ರಾತ್ರಿಯನ್ನು ಆಧಾರ ಮಾಡಿಕೊಂಡು ಮನುಷ್ಯನ ಹಗಲು ರಾತ್ರಿಯನ್ನು ಗುರುತಿಸಬಹುದೆಂದು ಭಗವಂತನು ಅಕ್ಷರ ಪರಬ್ರಹ್ಮಯೋಗದಲ್ಲಿ 17ನೇ ಶ್ಲೋಕದಲ್ಲಿ ತಿಳಿಸಿದ್ದಾನೆ.

ಈಗ ಕೆಲವರು ಮತ್ತೊಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ನಮ್ಮ ತಲೆಯಲ್ಲಿ ಹಣೆಯಭಾಗಕ್ಕೆ ಸಮಾನವಾಗಿ ತಲೆ ಮಧ್ಯದಲ್ಲಿರುವ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳಲ್ಲಿ ಮೇಲಿರುವ ಬ್ರಹ್ಮಚಕ್ರ ಎರಡು ಭಾಗಗಳಾಗಿ ಇದೆಯೆಂದು, ಬ್ರಹ್ಮಚಕ್ರ ಒಂದು ಭಾಗ ತಿರುಗುವುದಕ್ಕೆ ಸಾವಿರಯುಗಗಳ ಕಾಲ ಬೇಕಾಗುವುದೆಂದು, ಎರಡು ಭಾಗಗಳು ಸೇರಿ ಒಂದು ಸುತ್ತು ತಿರುಗುವುದಕ್ಕೆ ಎರಡು ಸಾವಿರಯುಗಗಳ ಕಾಲ ಬೇಕಾಗುವುದೆಂದು, ಒಂದು ಭಾಗದ ಸಹಸ್ರಯುಗಗಳ ಕಾಲ ದೇವರಿಗೆ ಒಂದು ಹಗಲೆಂದು, ಮತ್ತೊಂದು ಭಾಗದ ಸಾವಿರ ಯುಗಗಳ ಕಾಲ ದೇವರಿಗೆ ಒಂದು ರಾತ್ರಿಯೆಂದು ನೀವೇ ಹೇಳಿದ್ದೀರಾ ಅಲ್ಲವೆ! ಅಷ್ಟೇ ಅಲ್ಲದೆ ದೇವರ ಹಗಲು ಕಾಲವಾದ ಸಾವಿರಯುಗಗಳು ಪ್ರಪಂಚವಿದೆಯೆಂದು, ಹಾಗೆ ದೇವರ ರಾತ್ರಿಕಾಲವಾದ ಸಾವಿರಯುಗಗಳು ಪ್ರಪಂಚ ಇಲ್ಲವೆಂದು ಹೇಳಿದ್ದೀರಾ ಅಲ್ಲವೆ! ಹಾಗಾದರೆ ದೇವರ ರಾತ್ರಿ ಆದ ಬ್ರಹ್ಮಚಕ್ರದಲ್ಲಿನ ಅರ್ಧಭಾಗ ತಿರುಗುವಾಗ ಸಾವಿರಯುಗಗಳು ಪ್ರಪಂಚ ಇಲ್ಲ ಎಂದೇ ಅರ್ಥ. ನೀವು ಆಗಲೂ ಸಹ ಪ್ರಪಂಚ ನಾಶವಾಗದೆಂದು, ಜೀವಿಗಳು ಹೇಗೆ ಇರುವವೋ ಹಾಗೇ ಇರುವವೆಂದು, ಮನುಷ್ಯರು ಇಲ್ಲದೆ ಹೋಗುವ ಪ್ರಸಕ್ತಿಯೇ ಇಲ್ಲವೆಂದು ಹೇಳುತ್ತಿದ್ದೀರಾ. ನೀವು ಹೇಳುವ ಮಾತು ಬ್ರಹ್ಮಚಕ್ರ ಗಮನಕ್ಕೆ ಸರಿಹೋಗುವುದಿಲ್ಲ. ಬ್ರಹ್ಮಚಕ್ರದಲ್ಲಿ ಅರ್ಧಭಾಗದಲ್ಲಿ ಪ್ರಪಂಚವಿಲ್ಲ ಎಂದು ದೇವರೇ ಹೇಳಿದಾಗ ಆ ಅರ್ಧಭಾಗದಲ್ಲಿ ಸಹ ಪ್ರಪಂಚವಿದೆಯೆಂದು ನೀವು ಹೇಳುವುದು ತಪ್ಪಲ್ಲವೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಇಲ್ಲಿದೆ.

ಬ್ರಹ್ಮಚಕ್ರ ಮನುಷ್ಯನ ತಲೆಯಲ್ಲಿ ಇದೆ. ಬ್ರಹ್ಮಚಕ್ರದಲ್ಲಿಯೇ ದೇವರ ಹಗಲು ರಾತ್ರಿ ಭಾಗಗಳು ಎರಡೂ ಇವೆ. ಮನುಷ್ಯನಿಗೆ ಯಾವಾಗಾದರೆ ಜ್ಞಾಪಕ (ಎಚ್ಚರ) ಇದೆಯೋ ಆ ಕಾಲವನ್ನು ಹಗಲೆಂದೂ, ಹಾಗೆ ಮನುಷ್ಯನಿಗೆ ಯಾವಾಗಾದರೆ ಜ್ಞಪ್ತಿ (ಎಚ್ಚರ) ಇಲ್ಲದೆ ಹೋಗಿ ಮರೆವು ಎಂಬ ನಿದ್ರೆ ಬರುತ್ತದೊ ಆ ಕಾಲವನ್ನು ರಾತ್ರಿ ಎಂದು ಹೇಳಿಕೊಂಡಿದ್ದೇವೆ. ಬ್ರಹ್ಮಚಕ್ರದಲ್ಲಿನ ಹಗಲು ಸಾವಿರಯುಗಗಳೂ, ರಾತ್ರಿ ಸಾವಿರ ಯುಗಗಳು ಮಾನವನಿಗಾಗಿಯೇ ಲೆಕ್ಕದಲ್ಲಿವೆ ಯೆಂದು ಹೇಳಿಕೊಂಡಿದ್ದೇವೆ. ದೇವರ ಸಾವಿರ ಯುಗಗಳ ಹಗಲು ಕಾಲವನ್ನು ಮನುಷ್ಯನಿಗೆ ಒಂದು ಕರ್ಮಹಗಲೆಂದು ಗುರುತಿಸಿ ಸಹ ಹೇಳಿದ್ದೇವೆ. ದೇವರ ನಮೂನೆಯಲ್ಲಿಯೇ ಜೀವಿಯು ಜೀವಿಸುತ್ತಿದ್ದಾನೆ. ಅದರ ಪ್ರಕಾರ ಜೀವಿಗೆ (ಮನುಷ್ಯನಿಗೆ) ಸಹ ಹಗಲು ರಾತ್ರಿ ಏರ್ಪಡುತ್ತಿದೆ. ದೇವರ ಹಗಲು ಪ್ರಪಂಚ ಇರುವಹಾಗೆ, ಜೀವಿಯ ಹಗಲು ಕಾಲದಲ್ಲಿ ಸಹ ಪ್ರಪಂಚವಿದೆಯೆಂದು ಹೇಳಿಕೊಂಡಿದ್ದೇವೆ. ಆದರೆ ಇಲ್ಲಿ ಮುಖ್ಯವಾಗಿ ತಿಳಿಯಬೇಕಾದ ಸಮಾಚಾರವು ಒಂದು ಇದೆ. ಅದೇನೆಂದರೆ! ಒಬ್ಬ ಮನುಷ್ಯನಿಗೆ ಹಗಲು ಕಾಲ ನಡೆಯುತ್ತಿರುವಾಗ ಆ ಮನುಷ್ಯನ ತಲೆಯಲ್ಲಿನ ಬ್ರಹ್ಮ ಚಕ್ರದಲ್ಲಿ ಇರುವ ಅರ್ಧಭಾಗವಾದ ಹಗಲು ಮಾತ್ರವೆ ತಿರುಗುತ್ತಿರುತ್ತದೆ. ಅದೇ ಪ್ರಕಾರ ಒಬ್ಬ ಮನುಷ್ಯನಿಗೆ ರಾತ್ರಿ ಕಾಲ ನಡೆಯುತ್ತಿರುವಾಗ ಆ ಮನುಷ್ಯನ ಬ್ರಹ್ಮಚಕ್ರದಲ್ಲಿನ ರಾತ್ರಿ ಅರ್ಧಭಾಗದಲ್ಲಿ ಚಲನೆ ಬಂದು ತಿರುಗುತ್ತದೆ. ದೇವರು ನಿರ್ಣಯಿಸಿದ ಪ್ರಕಾರವೇ ಶರೀರದಲ್ಲಿ ನಡೆಯುತ್ತದೆ. ಆದ್ದರಿಂದ ಮನುಷ್ಯನ ಹಗಲು ಸಮಯದಲ್ಲಿ ಬ್ರಹ್ಮಚಕ್ರದಲ್ಲಿನ ಒಂದು ಭಾಗದಲ್ಲಿ ಚಲನೆ ಬಂದು ತಿರುಗುವುದು. ಬ್ರಹ್ಮಚಕ್ರದಲ್ಲಿನ ಹಗಲು ಭಾಗ ತಿರುಗುತ್ತಿರುವಾಗ, ರಾತ್ರಿ ಭಾಗ ಚಲನೆಯಿಲ್ಲದೆ ನಿಂತಿರುತ್ತದೆ. ಹಾಗೆ ರಾತ್ರಿ ಭಾಗ ತಿರುಗುತ್ತಿರುವಾಗ, ಹಗಲು ಭಾಗ ಯಾವುದೇ ಚಲನೆ ಇಲ್ಲದೆ ನಿಂತು ಹೋಗುತ್ತದೆ.

ಈಗ ಕೆಲವರಲ್ಲಿ ಮತ್ತೊಂದು ಪ್ರಶ್ನೆ ಹುಟ್ಟಬಹುದು. ಅದೇನೆಂದರೆ! ಬ್ರಹ್ಮಚಕ್ರದಲ್ಲಿ ಎರಡು ಭಾಗಗಳಿವೆಯೆಂದು ನೀವೇ ಹೇಳಿದ್ದೀರಲ್ಲವೆ! ಅದರಲ್ಲಿ ಒಂದು ಭಾಗ ಕದಲಿದರೆ ಚಕ್ರವೆಲ್ಲಾ ತಿರುಗಿ ಎರಡನೆಭಾಗವು ಸಹ ಕದಲುತ್ತದೆ ಅಲ್ಲವೆ! ಆಗಿರುವಾಗ ಒಂದು ಭಾಗ ಕದಲಿ ತಿರುಗುವಾಗ ಎರಡನೆ ಭಾಗ ಕದಲದಂತೆ ಇರುತ್ತದೆಂದು ಹೇಳುವುದು ತಪ್ಪಲ್ಲವೆ? ಎಂದು ಕೇಳಬಹುದು. ಈ ಪ್ರಶ್ನೆಗೆ ನಮ್ಮ ಉತ್ತರ ಹೀಗಿದೆ. ನಮ್ಮ ಮಾತು ಪೂರ್ತಿಯಾಗಿ ಅರ್ಥವಾದಾಗ ಯಾರಿಗಾದರೂ ತಪ್ಪಾಗಿ ಕಾಣಿಸುವುದರಲ್ಲಿ ವಿಚಿತ್ರವೇನೂ ಇಲ್ಲ. ಇಲ್ಲಿ ಬ್ರಹ್ಮ ಚಕ್ರವನ್ನು ಕುರಿತು ಪೂರ್ತಿಯಾಗಿ ತಿಳಿದುಕೊಂಡರೇ ನಮ್ಮ ಮಾತು ತಪ್ಪಾಗಿ ಕಾಣಿಸದು. ನಾವು ಹೇಳಿರುವುದು ಸತ್ಯವೇ ಎಂದು ತಿಳಿಯುವುದು. ಬ್ರಹ್ಮಚಕ್ರವು ಎರಡು ಭಾಗಗಳಾಗಿ ಇರುವುದು ನಿಜ, ಆದರೆ ಎರಡು ಭಾಗಗಳು ಒಂದರೊಂದಿಗೆ ಒಂದು ಅನುಸಂಧಾನವು ಮಾಡಿಲ್ಲ. ಆ ಎರಡು ಭಾಗಗಳು ಬಿಡಿಬಿಡಿಯಾಗಿ ಇವೆ. ಬ್ರಹ್ಮಚಕ್ರದಲ್ಲಿನ ಹಗಲು, ರಾತ್ರಿ ಭಾಗಗಳು ಬೇರೆ ಬೇರೆಯಾಗಿ ಇರುವುದರಿಂದ ಮನುಷ್ಯನ ಜೀವನದಲ್ಲಿ ಖಂಡಿತವಾಗಿ ಅರ್ಧ ಹಗಲು, ಅರ್ಧ ರಾತ್ರಿ ಎನ್ನುವುದು ಇಲ್ಲದೆ ಹೋಗಿದೆ. ಒಬ್ಬನು ಹಗಲನ್ನು ಹೆಚ್ಚಿಗೆ ಅನುಭವಿಸಿದರೆ, ರಾತ್ರಿಯನ್ನು ಕಡಿಮೆ ಅನುಭವಿಸುತ್ತಾನೆ. ಹಾಗೆ ಮತ್ತೊಬ್ಬನು ರಾತ್ರಿಯನ್ನು ಹೆಚ್ಚಾಗಿ ಅನುಭವಿಸಿದರೆ, ಹಗಲನ್ನು ಕಡಿಮೆ ಅನುಭವಿಸುತ್ತಾನೆ. ಯಾರ ಜೀವನದಲ್ಲೂ ಸಹ ರಾತ್ರಿ ಹಗಲು ಸಮಾನವಾಗಿ ಇಲ್ಲ. ಅದಕ್ಕೆ ಕಾರಣ, ಬ್ರಹ್ಮಚಕ್ರದಲ್ಲಿನ ಹಗಲು ರಾತ್ರಿ ಭಾಗಗಳು ಎರಡು ಒಂದರೊಂದಿಗೆ ಒಂದು ಅನುಸಂಧಾನವಾಗಿ ಇಲ್ಲದಿರುವುದೇ ಕಾರಣವೆಂದು ಹೇಳಬಹುದು. ಬ್ರಹ್ಮಚಕ್ರದಲ್ಲಿನ ಎರಡು ಭಾಗಗಳು ಬೇರೆಬೇರೆಯಾಗಿ ಹೇಗಿವೆಯೊ ಮುಂದಿನ ಪುಟದಲ್ಲಿ ನೋಡಬಹುದು.




ಬ್ರಹ್ಮಚಕ್ರದ ಚಿತ್ರ (1)




ಬ್ರಹ್ಮಚಕ್ರದ ಚಿತ್ರ (2)

ಈ ಚಕ್ರದಲ್ಲಿ ಹಗಲು ಕಾಲ ರಾತ್ರಿ ಕಾಲವನ್ನು ಸಹ ಆಕ್ರಮಿಸಿದಂತಿದೆ. ಆದುದರಿಂದ ಮನುಷ್ಯ ಹೆಚ್ಚಿನ ಕಾಲ ಎಚ್ಚರ ಕಡಿಮೆ ಕಾಲ ನಿದ್ರಿಸುವವನ ಚಕ್ರದಲ್ಲಿನ ನಮೂನೆ ವಿಧಾನ ಹೀಗಿರುತ್ತದೆಂದು ತಿಳಿಯಬಹುದು.




ಬ್ರಹ್ಮಚಕ್ರದ ಚಿತ್ರ (3)

ಈ ಚಿತ್ರದಲ್ಲಿ ರಾತ್ರಿ ಕಾಲ ಹಗಲು ಕಾಲವನ್ನು ಆಕ್ರಮಿಸಿಕೊಂಡಿದೆ. ಆದುದರಿಂದ ಮನುಷ್ಯ ಹೆಚ್ಚಿನ ಕಾಲ ನಿದ್ರೆಹೋಗಿ ಕಡಿಮೆ ಕಾಲ ಎಚ್ಚರವಿರುವವನ ಚಕ್ರದಲ್ಲಿನ ನಮೂನೆ ವಿಧಾನ ಹೀಗಿರುತ್ತದೆಂದು ತಿಳಿಯಬೇಕು.

ಬ್ರಹ್ಮಚಕ್ರ ದೇವರ ವಿಧಾನದಲ್ಲಿ ಅರ್ಧಭಾಗ ತಿರುಗುವುದಕ್ಕೆ ಸಾವಿರ ಯುಗಗಳ ಕಾಲ ಬೇಕಾಗುತ್ತದೆ. ಅಷ್ಟು ದೊಡ್ಡ ಬ್ರಹ್ಮಚಕ್ರವನ್ನು ಜೀವಾತ್ಮನ ವಿಧಾನದೊಳಗೆ ಬದಲಾಯಿಸಿಕೊಂಡು ಮನುಷ್ಯನ ಹಗಲು ರಾತ್ರಿಕಾಲವನ್ನು ಲೆಕ್ಕಿಸಿ ನೋಡಬೇಕೆಂದು ತಿಳಿಸುತ್ತಿದ್ದೇವೆ. ಒಂದು ಸಂವತ್ಸರ ಕಾಲವನ್ನು ಒಂದು ಸೆಕೆಂಡಾಗಿ ಬದಲಾಯಿಸಿಕೊಂಡರೆ ಎಷ್ಟು ಚಿಕ್ಕದಾಗುತ್ತದೊ, ಅಷ್ಟು ಚಿಕ್ಕದಾಗಿ ಬ್ರಹ್ಮಚಕ್ರವನ್ನು ಮನುಷ್ಯನ ವಿಧಾನದಲ್ಲಿ ಚಿತ್ರಿಸಿಕೊಂಡು ನೋಡಬೇಕೆಂದು ತಿಳಿಸುತ್ತಿದ್ದೇವೆ. ಒಂದು ಸಂವತ್ಸರವನ್ನು ಒಂದು ಸೆಕೆಂಡಾಗಿ ಬದಲಾಯಿಸಿ ಕೊಂಡು ನೋಡುವ ನಮೂನೆಯನ್ನು ಮಾತ್ರ ಮೇಲಿನ ಚಿತ್ರದಲ್ಲಿ ತೋರಿ ಸಿದ್ದೇನೆಂದು ತಿಳಿಯಬೇಕು. ಮನುಷ್ಯ ಹಗಲೆ ಹೆಚ್ಚಿಗೆ ಜೀವಿಸಿ ರಾತ್ರಿ ಕಡಿಮೆ ಜೀವಿಸಿದ ವಿಧಾನವನ್ನು, ಹಾಗೆ ರಾತ್ರಿ ಹೆಚ್ಚಿನ ಕಾಲವನ್ನು ವಿನಿಯೋಗಿಸಿಕೊಂಡು ಹಗಲು ಕಡಿಮೆ ಕಾಲವನ್ನು ವಿನಿಯೋಗಿಸಿಕೊಂಡ ವಿಧಾನವನ್ನು ಮೇಲಿನ ಚಿತ್ರದಲ್ಲಿ ತೋರಿಸಿದ್ದೇನೆಂದು ಅರ್ಥ ಮಾಡಿಕೊಳ್ಳಬೇಕು.

ಮನುಷ್ಯ ತನ್ನ ಜೀವನದಲ್ಲಿ ರಾತ್ರಿ ಹಗಲುಗಳನ್ನು ಹೆಚ್ಚು ಕಡಿಮೆಯಾಗಿ ಕರ್ಮವನ್ನು ಅನುಸರಿಸಿ ಅನುಭವಿಸುತ್ತಿದ್ದಾನೆ. ಹಾಗೆ ಒಂದು ಜನ್ಮಕ್ಕೆ ನಿರ್ಣ ಯಿಸಲಾದ ಪ್ರಾರಬ್ಧಕರ್ಮವನ್ನು ಅನುಭವಿಸಿ, ಪ್ರಾರಬ್ಧಕರ್ಮ ಮುಗಿದ ತಕ್ಷಣವೆ ಆ ಜನ್ಮದಲ್ಲಿ ಮರಣಿಸಿ ಅಲ್ಲಿಯವರೆಗಿರುವ ಶರೀರವನ್ನು ಬಿಟ್ಟುಹಾಕಿ ತನ್ನ ಸಂಚಿತದಿಂದ ಹೊಸ ಪ್ರಾರಬ್ಧಕರ್ಮವನ್ನು ತೆಗೆದುಕೊಂಡು ಪುನಃ ಹೊಸ ಶರೀರವನ್ನು ಧರಿಸಿ ಜನ್ಮಿಸುತ್ತಿರುವನು. ಈ ವಿಧವಾಗಿ ಜೀವಿಯು ಜನ್ಮಗಳನ್ನು ಬದಲಾಯಿಸುತ್ತಿರುವನು. ಕೊನೆಗೆ ಸಂಚಿತಕರ್ಮ ಎಲ್ಲವು ಮುಗಿದು ಪ್ರಾರಬ್ಧವಾಗಿ ಬದಲಾಗುವುದಕ್ಕೆ ಇಲ್ಲದಿರುವಾಗ ಆ ಜೀವಿಯು ದೇವರಲ್ಲಿ ಐಕ್ಯವಾಗಿ ಹೋಗುವನು. ಜನ್ಮಗಳಿಂದ ಬಿಡುಗಡೆಯಾಗಿ ಕರ್ಮಗಳಿಂದ ಮುಕ್ತಿ ಹೊಂದು

ವನು. ಅಲ್ಲಿಯವರೆಗು ತಿಳಿಯದ ದೇವರು ಆಗ ಮಾತ್ರ ತಿಳಿಯುವನು. ಅಲ್ಲಿಯವರೆಗು ಜನ್ಮಗಳೆತ್ತುತ್ತಿರುವ ಯಾರಿಗೂ ದೇವರು ಹೇಗೆ ಇರುತ್ತಾನೋ ತಿಳಿಯದು, ಯಾರೂ ದೇವರನ್ನು ನೋಡಿಲ್ಲ. ಕರ್ಮದಿಂದ ಮುಕ್ತಿಹೊಂದಿದ ಜೀವಿಯು ದೇವರಲ್ಲಿ ಐಕ್ಯವಾಗಿ ಹೋಗುವನು. ಆಗ ಜೀವಿಯು, ದೇವರು ಎಂಬ ಬೇಧವಿರುವುದಿಲ್ಲ. ಅಲ್ಲಿಯವರೆಗೂ ಯಾವ ಜೀವಾತ್ಮನಾದರು ಭೂಮಿಮೇಲೆ ಜನ್ಮಗಳು ಧರಿಸುತ್ತಾ ಕರ್ಮವನ್ನು ಅನುಭವಿಸುತ್ತಾ ಕಾಲವನ್ನು ಕಳೆಯಬೇಕಾಗಿದೆ. ಕರ್ಮಗಳು ಮುಗಿಯದವನು ಜನ್ಮಗಳು ಎತ್ತುತ್ತಾ ಎಷ್ಟುಕಾಲ ಜೀವಿಸಬೇಕು? ಈ ಜನ್ಮಗಳಿಗೆ ಅಂತ್ಯ ಇಲ್ಲವೆ? ಸ್ವಲ್ಪಕಾಲವಾದರೂ ಈ ಕಾಲಚಕ್ರವು ನಿಲ್ಲುವುದಿಲ್ಲವೇ? ಪ್ರಳಯದಲ್ಲಿ ಎಲ್ಲ ಅಂತ್ಯವಾಗಿಹೋಗಿ 108 ಕೋಟಿ ಸಂವತ್ಸರಗಳ ನಂತರ ಪುನಃ ಹುಟ್ಟುತ್ತಾನೆಂಬ ಮಾತು ಅಸತ್ಯವಾ? ದೇವರಿಗೆ ಜೀವಿಗಳ ಮೇಲೆ ದಯೆ ದಾಕ್ಷಿಣ್ಯಗಳಿರುವುದಿಲ್ಲವೆ? ಎಷ್ಟುಕಾಲ ನಾವು ಜೀವಿಸಬೇಕು? ಖಗೋಳದಿಂದ ಬರುವ ಆಸ್ಟ್ರಾಯಿಡ್ಸ್ ಭೂಮಿಯನ್ನು ಗುದ್ದಿಕೊಂಡು, ಭೂಮಿ ಧೂಳಿನಂತೆ ಬದಲಾಗುತ್ತದೆಂದು, ಭೂಮಿಮೇಲೆ ಜೀವರಾಶಿಗಳೆಲ್ಲ ಇಲ್ಲದೆ ಹೋಗುತ್ತವೆಂದು ಹೇಳುತ್ತಿರುವ ಶಾಸ್ತ್ರಜ್ಞರ ಮಾತು ಅಸತ್ಯವೇ? ಪ್ರಳಯ ಪ್ರಭವಗಳು ಅಸತ್ಯವೇ? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ.

ನಿಮ್ಮ ಪ್ರಶ್ನೆಗಳಿಗೆ ನಂತರ ಉತ್ತರಗಳನ್ನು ಹೇಳುವೆನು. ಅದಕ್ಕಿಂತ ಮೊದಲು ಸ್ವಲ್ಪ ಸಮಾಚಾರವನ್ನು ಹೇಳುವೆನು ಕೇಳಿರಿ. 1994 ಸಂವತ್ಸರ ಏಪ್ರಿಲ್ ಕೊನೆಯ ದಿನಗಳಲ್ಲಿ ನಾನು ಢಿಲ್ಲೀಯಿಂದ ರೈಲಿನಲ್ಲಿ ಪ್ರಯಾಣ ಮಾಡಿ ಬಂದು ಸಿಕಿಂದ್ರಾಬಾದ್ ಸ್ಟೇಷನ್‌ನಲ್ಲಿ ಇಳಿದು ಅಲ್ಲಿಯೇ ಹತ್ತಿರವಿರುವ ರೈಲ್ವೇ ಮೆಜಿಸ್ಟ್ರೇಟ್ ಅವರ ಮನೆಗೆ ಹೋಗಬೇಕಾಗಿಯಿತು. ಆತನು ನನಗೆ ಚೆನ್ನಾಗಿ ತಿಳಿದವನು, ಆದ್ದರಿಂದ ನನ್ನ ಕಾರನ್ನು ಅವರ ಮನೆಯಹತ್ತಿರ ನಿಲ್ಲಿಸಿರುವುದರಿಂದ ನಾನು ಅವರ ಮನೆಗೆ ಹೋಗಬೇಕಾಗಿಬಂತು. ಆ ಮೆಜಿಸ್ಟ್ರೇಟ್‌ರವರು ಬ್ರಹ್ಮಕುಮಾರಿ ಸಮಾಜದಲ್ಲಿ ಪಾಲ್ಗೊಂಡು ಜ್ಞಾನವನ್ನು

ತಿಳಿದುಕೊಳ್ಳುತ್ತಿದ್ದನು. ನಾನು ಗನ್‌ಲೈಸೆನ್ಸ್ ತೆಗೆದುಕೊಂಡಿದ್ದೇನೆಂದು ತಿಳಿದು ಆತನು ನನ್ನ ಹತ್ತಿರ ಹೀಗೆ ಹೇಳದನು. ನಿನಗೆ "ಗನ್‌ಲೈಸೆನ್ಸ್ ಏಕೆ ಅನವಶ್ಯಕವಾಗಿ? 1994 ಸಂವತ್ಸರದ ಕೊನೆಗೆಲ್ಲಾ ಪ್ರಳಯ ಬಂದು ಪ್ರಪಂಚವೆಲ್ಲಾ ಇಲ್ಲದೆ ಹೋಗುತ್ತದೆಂದು, ನಮ್ಮ ಬ್ರಹ್ಮಕುಮಾರಿ ಸಮಾಜದಲ್ಲಿನ ಹಿರಿಯರು ತಿಳಿಸಿದ್ದಾರೆ. ಇದು ಅವರಿಗೆ ದೈವದಿಂದ ಬಂದ ಸಂದೇಶ. ಆದ್ದರಿಂದ ಇನ್ನು ಆರು ಅಥವಾ ಏಳು ತಿಂಗಳಲ್ಲಿ ಎಲ್ಲಾ ಹೋಗುತ್ತದೆ. ಎಲ್ಲರೂ ಹೋಗುವಾಗ ಗನ್‌ಲೈಸನ್ಸ್ ಏಕೆ" ಎಂದು ಅಂದನು. ಆತನು ದೊಡ್ಡ ಮನುಷ್ಯ ಆಗಿರುವುದರಿಂದ, ಮತ್ತು ದೊಡ್ಡ ಜ್ಞಾನ ಸಂಸ್ಥೆಯಾದ ಬ್ರಹ್ಮಕುಮಾರಿ ಸಮಾಜದವರು ಹೇಳಿರುವುದರಿಂದ ಆ ಮಾತು ಸತ್ಯವೇ ಆಗಿರುತ್ತದೆಂದು ನಾನು ಸಹ ಸ್ವಲ್ಪ ಅಂದುಕೊಂಡೆನು. ಅದೇ ವಿಷಯವನ್ನೇ ನಾನೂ ಸಹ ನನಗೆ ತಿಳಿದ ಕೆಲವರಿಗೆ ಹೇಳಿದೆನು. ಕೊನೆಗೆ ಆ ಸಂವತ್ಸರದಲ್ಲಿ ಡಿಸೆಂಬರ್ ತಿಂಗಳು ಸಹ ಬರುವುದು, ಹೋಗುವುದು ನಡೆಯಿತು. ನಂತರ 1995 ಸಂವತ್ಸರ ಪ್ರಾರಂಭವಾಗಿದೆ. ಇದರಿಂದ 1994 ಸಂವತ್ಸರ ಪ್ರಳಯ ಬರುತ್ತದೆ ಎಂಬ ಮಾತು ಅಸತ್ಯವಾಗಿದೆ.

ಆ ನಂತರ ಸ್ವಲ್ಪ ಕಾಲ ಕಳೆದುಹೋಗಿ 1996ನೇ ಸಂವತ್ಸರ ಬಂದಿದೆ. ಆಗ "ಕಲಿಯುಗಾಂತ 1999" ಎಂಬ ಪುಸ್ತಕವನ್ನು ನೋಡಿದೆನು. ಆ ಪುಸ್ತಕವನ್ನು ತೆಗೆದು ನೋಡಿದರೆ ಅದರ ರಚನೆಕಾರ ವೇದವ್ಯಾಸ್ ಐ.ಎ.ಯಸ್. ಎಂದು ಇದೆ. ಒಬ್ಬ ವಿದ್ಯಾವಂತ ಮತ್ತು ದೊಡ್ಡಜ್ಞಾನಿ ಎಂದು ಹೆಸರುಪಡೆದ ವ್ಯಕ್ತಿ ಬರೆದ ಪುಸ್ತಕದಲ್ಲಿನ ಸಮಾಚಾರವು ಸತ್ಯವೇ ಆಗಿರುತ್ತದೆಂದು ಆಗಿರುತ್ತದೆಂದು ಕೊಂಡು ನಾನು ಆ ಪುಸ್ತಕವನ್ನು ತೆಗೆದುಕೊಳ್ಳಲಾಯಿತು. ನಂತರ ಆ ಪುಸ್ತಕವನ್ನು ಓದಿದರೆ 1999 ಸಂವತ್ಸರ ತಪ್ಪದೆ ಕಲಿಯುಗಾಂತವಾಗುತ್ತದೆಂದು ಎಷ್ಟೋ ಆಧಾರಗಳು ಹೇಳಲಾಗಿದೆ. ಅವೆಲ್ಲವು ನೋಡಿದ ನಂತರ ಒಂದು ಕಡೆ ಅದು ಅಸತ್ಯವೆಂದು ತಿಳಿದರೂ ನಾನು ಸಹ ತಪ್ಪದೆ ಯುಗಾಂತ ಆಗುವುದೇನೋ ಎಂದು ಅಂದುಕೊಂಡಿದ್ದೇನೆ. ಕೊನೆಗೆ 1999 ಕಳೆದುಹೋಗಿ 2000 ಸಂವತ್ಸರ ಬಂದು ವೇದವ್ಯಾಸ್ ಬರೆದ ಮಾತು ಸುಳ್ಳು ಎನಿಸಿತು. ಈ ವಿಧವಾಗಿ

ಕಲಿಯುಗಾಂತ ಎಂಬಮಾತು ಎರಡು ಬಾರಿ ಸುಳ್ಳಾಗಿದೆ. ಪ್ರಸ್ತುತ ಈಗ ಎರಡು ಸಂವತ್ಸರಗಳಿಂದ, 2012 ಕಲಿಯುಗಾಂತ ಎಂಬ ಮಾತು ಹೊರಬಂದಿದೆ. ಈ ಬಾರಿ ತಿಂಗಳು, ದಿನ ನಿರ್ಣಯಮಾಡಿ 2012 ಡಿಸೆಂಬರ್, 21ನೇ ದಿನಾಂಕದಂದು ಕಲಿಯುಗ ಅಂತ್ಯವಾಗುತ್ತದೆಂದು ಹೇಳುವುದು ನಡೆಯುತ್ತದೆ. ಈಗ ಒಂದುಕಡೆ ಜ್ಯೋತಿಷ್ಯ ಶಾಸ್ತ್ರಜ್ಞರು, ಮತ್ತೊಂದು ಕಡೆ ಖಗೋಳ ಶಾಸ್ತ್ರಜ್ಞರು, ಇನ್ನೊಂದು ಕಡೆ ಮತ್ತೊಂದು ಆಧ್ಯಾತ್ಮಿಕ ಸಂಸ್ಥೆಯವರು, ಇನ್ನೂ ಹೆಸರು ಹೊಂದಿದ ವಿದೇಶೀ ಕ್ಯಾಲೆಂಡರು 2012 ಸಂವತ್ಸರದೊಂದಿಗೆ ಮುಗಿದುಹೋ ಗುತ್ತದೆಂದು, ನಂತರ ಆ ಕ್ಯಾಲೆಂಡರನ್ನು ಬರೆಯುವುದಿಲ್ಲವೆಂದು ಆದ್ದರಿಂದ ತಪ್ಪದೆ ಯುಗಾಂತ ನಡೆದುಹೋಗುತ್ತದೆಂದು ಕೆಲವರು ಹೇಳಿರುವುದು ನಡೆದಿದೆ. ಇದೆಲ್ಲವೂ ಅಲ್ಲದೆ ಟಿವಿ 9 ಛಾನಲ್‌ನವರು 2011 ಡಿಸೆಂಬರ್ 20ನೇ ದಿನಾಂಕದಂದು "ಯುಗಾಂತ 365 ದಿನಗಳು" ಎಂಬ ಹೆಸರಿನ ಮೇಲೆ ಚರ್ಚಾವೇದಿಕೆ ನಿರ್ವಹಿಸಿದ್ದರು. ಆ ಚರ್ಚೆಯಲ್ಲಿ ಪಾಲ್ಗೊಂಡವರು ತಪ್ಪದೆ ಯುಗಾಂತ ಆಗುತ್ತದೆಂದು ಕೆಲವರು ಹೇಳಿದರೆ, ವೀರಬ್ರಹ್ಮಯ್ಯನವರ ಕಾಲಜ್ಞಾನದ ಕಡೆಯಿಂದ ಬಂದ ವ್ಯಕ್ತಿ ಮಾತ್ರ ಬ್ರಹ್ಮಯ್ಯನವರು ಹೇಳಿದ ಸಂಘಟನೆಗಳು ಕೆಲವು ಮಾತ್ರ ನಡೆದಿವೆಯೆಂದು, ಇನ್ನೂ ನಡೆಯಬೇಕಾಗಿರುವವು ಎಷ್ಟೋ ಇವೆಯೆಂದು, ಆದ್ದರಿಂದ 2012 ಡಿಸೆಂಬರ್, 21 ದಿನದಂದು ಯುಗಾಂತ ನಡೆಯುವುದಿಲ್ಲವೆಂದು ವಾದಿಸುವುದು ನಡೆದಿದೆ. ಈ ಬಾರಿ ನಾವು ಸಹ ಯುಗಾಂತ ಅಸತ್ಯವೆಂದು ಹೇಳುವವರ ಮಾತನ್ನೇ ಒಪ್ಪಿಕೊಳ್ಳಬೇಕಾಗಿ ಬಂದಿದೆ. ನಮ್ಮ ಮಾತು ಪಕ್ಕಕ್ಕೆ ಇಟ್ಟರೆ ಸಾಮಾನ್ಯ ಪ್ರಜೆಗಳು ಕಲಿಯುಗಾಂತವನ್ನು ಕುರಿತು ವಿಧವಿಧವಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ.

ಕಲಿಯುಗಾಂತವನ್ನು ಕುರಿತು ಗತದಲ್ಲಿ 1994ರಲ್ಲೂ, 1999ರಲ್ಲೂ ಹೇಳಿದವರಾಗಲಿ, ಪ್ರಸ್ತುತ ಹೇಳುವವರಾಗಲಿ ಬ್ರಹ್ಮವಿದ್ಯಾಶಾಸ್ತ್ರವನ್ನು ಆಧಾರ ಮಾಡಿಕೊಂಡು ಹೇಳಿಲ್ಲ. ಈಗ ಪ್ರಜೆಗಳಲ್ಲಿ ನೆಲೆಗೊಂಡಿರುವ ಯುಗಾಂತ ವಿಷಯವನ್ನು ಷಟ್ ಶಾಸ್ತ್ರಗಳಲ್ಲಿ ದೊಡ್ಡದಾದ ಬ್ರಹ್ಮವಿದ್ಯಾಶಾಸ್ತ್ರದಿಂದ ಅನ್ವೇಷಿಸಿ,

ಅದು ಸತ್ಯವೋ ಅಸತ್ಯವೋ ತಿಳಿದುಕೊಳ್ಳಬೇಕೆಂದುಕೊಂಡಿದ್ದೇವೆ. ನನಗೆ ಇಷ್ಟವಾದ ಶಾಸ್ತ್ರವು, ಜೀವಿಗಳ ವಿಷಯದಲ್ಲಿ ಎಂದಿಗೂ ಸತ್ಯವನ್ನೇ ಪ್ರಕಟಿಸುವ ಬ್ರಹ್ಮವಿದ್ಯಾಶಾಸ್ತ್ರವನ್ನು ಉಪಯೋಗಿಸಿ ನೋಡಿದರೆ ಪ್ರಳಯವು, ಯುಗಾಂತ ಸತ್ಯವೋ ಅಲ್ಲವೋ ತಿಳಿದುಹೋಗುತ್ತದೆಂದು ಅಂದುಕೊಂಡು ಅನ್ವೇಷಿಸಿ ಬರೆದಿರುವುದೇ ಈ ಚಿಕ್ಕ ಗ್ರಂಥ. ಈ ಜನ್ಮಗಳಿಗೆ ಅಂತ್ಯ ಇಲ್ಲವೇ? ಸ್ವಲ್ಪ ಕಾಲವಾದರೂ ಜೀವಿಗಳಿಗೆ ವಿಶ್ರಾಂತಿ ಇಲ್ಲವೇ? ಎಂಬ ಪ್ರಶ್ನೆಗಳಿಗೆ ಉತ್ತರ ಇಲ್ಲವೆ ಎನ್ನುವ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳಿಕೊಂಡರೆ, ಎಲ್ಲ ಮತಗಳಲ್ಲಿ ಹೇಳಿಕೊಂಡ ಪ್ರಳಯವಿದೆ, ಆದರೆ ಪ್ರಳಯ ಎಂದರೆ ಏನೋ ಯಾರಿಗೂ ತಿಳಿಯದು. ಪ್ರಳಯವೆಂದರೆ ಸರ್ವನಾಶವಾಗಿಹೋಗುವುದೆ ಎಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಈಗ ನಾವು ಹೇಳುತ್ತಿರುವ ಸಂಚಲನೆ ರಹಸ್ಯ ಸಮಾಚಾರವನ್ನು ಅನುಸರಿಸಿ ನೋಡಿದರೆ ಪ್ರಳಯವೆನ್ನುವುದು ಇದೆ. ಆದರೆ ಅದರ ಸ್ವರೂಪ ಬೇರೆಯೆಂದು ತಿಳಿಯುತ್ತಿದೆ. ಪ್ರಭವ ಎಂದರೆ ಎಲ್ಲರೂ ಅಂದುಕೊಂಡಹಾಗೆ ಹೊಸದಾಗಿ ಸೃಷ್ಠಿಸಲ್ಪಡುವುದು ಎಂದು ಅಂದುಕೊಳ್ಳುವುದು ತಪೆಂದು ತಿಳಿಯುತ್ತಿದೆ. ಜೀವಿಗಳು ಎಲ್ಲರೂ ಸತ್ತು ಹೋಗುವುದು ಪ್ರಳಯವೆಂದು, ಎಲ್ಲರೂ ಪುನಃ ಹುಟ್ಟುವುದನ್ನು ಪ್ರಭವವೆಂದು ಅಂದುಕೊಳ್ಳುವುದು ದೇವರ ಧರ್ಮಕ್ಕೆ ವಿರುದ್ಧವಾಗುವುದು. ದೈವ ಧರ್ಮದ ಪ್ರಕಾರ ದೇವರು ಒಂದೇ ಬಾರಿ ವಿಶ್ವವೆಲ್ಲವನ್ನು ಸೃಷ್ಠಿಸಿದ್ದಾನೆ. ವಿಶ್ವವನ್ನು ಸೃಷ್ಠಿಸುವುದಕ್ಕಿಂತ ಮೊದಲು ಆತನು ಸೃಷ್ಠಿಕಾರ್ಯವನ್ನು ಮಾಡಿದ್ದಾನೆ. ಸೃಷ್ಠಿಯೇ ಇಲ್ಲದಿರುವಾಗ ಆತನು (ದೇವರು) ಹೇಗೆ ಕೆಲಸ ಮಾಡಿರುವುದು ಯಾರಿಗೂ ತಿಳಿದಿಲ್ಲ. ನಾವು ಇಲ್ಲದಿರುವಾಗ ಆತನು ಹೇಗೆ ಮಾಡಿದರೂ ಕೆಲಸ ಮಾಡಿದಹಾಗೆಂದು ನಾವು ಹೇಳಲಾರೆವು. ನಾವು ಸೃಷ್ಠಿಯಾದ ನಂತರ ದೇವರಿಗಿರುವ ಧರ್ಮದ ಪ್ರಕಾರ ಆತನು ಕೆಲಸ ಮಾಡುವುದಿಲ್ಲ. ಆದ್ದರಿಂದ ಆತನನ್ನು ಕ್ರಿಯಾರಹಿತನು ಎಂದು ಅಂದಿದ್ದೇವೆ. ಆತನು ಕೆಲಸ ಮಾಡದವನು, ಆತನು ಯಾವ ಕೆಲಸಕ್ಕೂ ಕೆಲಸಕ್ಕೆ ಬಾರದವನು ಎಂದು ಹೇಳುತ್ತಿದ್ದೇವೆ.

ದೇವರಿಗೆ ಸಾವಿರಯುಗಗಳು ಒಂದು ಹಗಲು, ಸಾವಿರಯುಗಗಳು ಒಂದು ರಾತ್ರಿ ಆಗಿರುವಾಗ ರಾತ್ರಿಯನ್ನು ಪ್ರಳಯವೆಂದು, ಹಗಲನ್ನು ಪ್ರಭವವೆಂದು ಹೇಳಿಕೊಂಡರೆ, ಪ್ರತಿ ಪ್ರಭವದಲ್ಲೂ ದೇವರು ಹೊಸದಾಗಿ ಸೃಷ್ಠಿಯನ್ನು ತಯಾರು ಮಾಡುತ್ತಿದ್ದಾನೆಂದು ಅಂದುಕೊಂಡರೆ, ಆತನು ಪ್ರತಿ ದಿನ ಕೆಲಸ ಮಾಡಿದಹಾಗೆ ಆಗುತ್ತದೆ. ದೇವರು ಪ್ರತಿ ದಿನ ಕೆಲಸ ಮಾಡುತ್ತಿದ್ದಾನೆ ಎನ್ನುವುದು ದೇವರ ಧರ್ಮಕ್ಕೆ ವಿರುದ್ಧವಾಗುತ್ತದೆ. ಆದ್ದರಿಂದ ಅಧರ್ಮಗಳೊಂದಿಗೆ ಕೂಡಿಕೊಂಡಿರುವ ಮಾತುಗಳನ್ನು ನಾವು ಹೇಳಬಾರದು. ದೇವರ ಧರ್ಮಗಳನ್ನೂ, ಜ್ಞಾನವನ್ನೂ ಮಾತನಾಡುವಾಗ ಬಹಳ ಜಾಗ್ರತೆಯಿಂದ ಮಾತನಾಡಬೇಕಾಗುತ್ತದೆ. ಹಾಗೆ ಅಲ್ಲದೆ ದೇವರ ಧರ್ಮಗಳಿಗೆ ವಿರುದ್ಧವಾಗಿ ಮಾತನಾಡಿದರೆ ಪಾಪವನ್ನು ಮೂಟೆ ಕಟ್ಟಿಕೊಳ್ಳಬೇಕಾಗುತ್ತದೆ. ಆದ್ದರಿಂದ ನಾವು ದೇವರ ಬಗ್ಗೆ ಭಯವಿದ್ದು ಮಾತನಾಡಿದರೆ, ದೇವರು ಒಂದೇ ಬಾರಿ ಸೃಷ್ಠಿಯನ್ನು ಸೃಷ್ಠಿಸಿದ್ದಾನೆ. ಆಗ ಹೇಗೆ ತಯಾರು ಮಾಡಿರುವುದು ಯಾರಿಗೂ ತಿಳಿದಿಲ್ಲವೆಂದು ಹೇಳಬಹುದು. ಆಗ ನಾವು ಇಲ್ಲವಾದ್ದರಿಂದ ಆಗಿನ ವಿಷಯವನ್ನು ನಾವು ಲೆಕ್ಕಿಸಲಾಗುವುದಿಲ್ಲ. ನಾವು ಸೃಷ್ಠಿಯಾದ ನಂತರ ಅಲ್ಲಿಂದ ಇಲ್ಲಿಯವರೆಗು ದೇವರು ಯಾವ ಕಾರ್ಯವು ಮಾಡಲಿಲ್ಲ. ಆದ್ದರಿಂದ ಆತನು ಕ್ರಿಯಾರಹಿತನು ಎನ್ನುವುದು ಧರ್ಮ. ದೇವರ ಧರ್ಮವನ್ನು ಅನುಸರಿಸಿ ನೋಡುತ್ತಾ ಬಂದರೆ, ಎಂದಿಗೂ ಕಾಲ ನಿಂತುಹೋಗದು. ನಾಲ್ಕು ಯುಗಗಳು ಮುಗಿದು ಹೋಗುತ್ತಲೇ ಪುನಃ ಕೃತ್‌ಯುಗ ಪ್ರಾರಂಭವಾಗುತ್ತದೆ. ಸತ್ತವನು ಅವನವನ ಕರ್ಮವನ್ನು ಅನುಸರಿಸಿ ಪುನಃ ಹುಟ್ಟುತ್ತಿರುವನು. ಹುಟ್ಟು ಸಾವುಗಳ ಅಂತ್ಯವಿಲ್ಲದ ಪ್ರಕ್ರಿಯೆಯಾಗಿ ಮುಂದಕ್ಕೆ ಸಾಗುತ್ತಿರುತ್ತವೆ. ದೇವರು ಕಾಲ ಸ್ವರೂಪನು, ಆದರೆ ದೇವರಿಗೆ ಅಂತ್ಯವಿಲ್ಲ. ಹಾಗೆ ಕಾಲಕ್ಕೆ ಅಂತ್ಯವಿಲ್ಲ. ಈ ಸೂತ್ರದ ಪ್ರಕಾರ, ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ, ಕಲಿಯುಗಕ್ಕೆ ಎಂದಿಗೂ ಅಂತ್ಯವಿಲ್ಲ. ಕಲಿಯುಗ 250 ಬಾರಿ ಬಂದರೆ 108 ಕೋಟಿ ಸಂವತ್ಸರಗಳಾದರೂ, ಮತ್ತೆ ಕೂಡಲೇ ಕೃತ್‌ಯುಗ ಪ್ರಾರಂಭವಾಗುತ್ತದೆ. ಹೀಗೆ ಎಡಬಿಡದ ಕಾಲದಲ್ಲಿ ಒಂದು ಕಲಿಯುಗಕ್ಕೆ ಅಲ್ಲದೆ, ಯಾವ ಯುಗಕ್ಕು ಸಹ ಅಂತ್ಯ ಇಲ್ಲ. ಸೃಷ್ಠಿ ಅಂತ್ಯವಾಗದು, ಪುನಃ ದೇವರು

ಸೃಷ್ಠಿಯನ್ನು ತಯಾರು ಮಾಡುವುದಿಲ್ಲ. ದೇವರು ಒಂದು ಬಾರಿ ತಯಾರು ಮಾಡಿದ ಸೃಷ್ಠಿ ಎಂದಿಗೂ ನಾಶವಾಗುವುದಿಲ್ಲ. ಅದು ನಾಶವೆನ್ನುವುದು ನಡೆದರೆ ಮೋಕ್ಷದಲ್ಲೆ ನಡೆಯಬೇಕು. ಅಲ್ಲಿಯವರೆಗು ನಾಶವಾಗುವುದಕ್ಕೆ ಅವಕಾಶವಿಲ್ಲ. **ಯಾವ ಜೀವರಾಶಿಯಾದರೂ ಈ ಕಡೆ ಪ್ರಕೃತಿಯಲ್ಲಾಗಲಿ ಇರಬೇಕು ಇಲ್ಲದೆ ಹೋದರೆ ದೇವರಲ್ಲಿಯಾದರೂ ಐಕ್ಯವಾಗಿ ಹೋಗಬೇಕು**. ಅಷ್ಟಲ್ಲದೆ ಯಾವ ಜೀವಾತ್ಮನು ಎಂತಹ ಸ್ಥಿತಿಯನ್ನು ಹೊಂದುವುದಕ್ಕೆ ಅವಕಾಶವಿಲ್ಲ, ಇದು ಶಾಸನ. ಆದ್ದರಿಂದ ಜಗತ್ತನ್ನು (ಜಗತ್ತು) ಸೃಷ್ಠಿಸಿದ ದೇವರು, ಜೀವಿಯು ಜನನ ಮರಣಗಳಿಂದ ಹೊರಬಿದ್ದು ತನ್ನಲ್ಲಿಯೇ ಐಕ್ಯವಾಗಿಹೋಗುವ ಹಾಗೆ ತನ್ನ ಜ್ಞಾನವನ್ನು ಸಹ ಸೃಷ್ಠಿ ಆದಿಯಲ್ಲಿಯೇ ತಿಳಿಸಿದ್ದಾನೆ.

ಸೃಷ್ಠಿಸಲ್ಪಟ್ಟ ಪ್ರತಿ ಜೀವರಾಶಿ ಆದಿಯಿಂದ ಇಂದಿನ ವರೆಗು ಜನ್ಮಗಳು ಬದಲಾಗುತ್ತಲೇ ಬರುತ್ತಿವೆ. ನಾವೂ ಸಹ ಆದಿಯಲ್ಲಿಯೇ ಸೃಷ್ಠಿಯಾಗಿದ್ದೇವೆ. ನಂತರ ಜನನ ಮರಣಗಳನ್ನು ಹೊಂದುತ್ತಿದ್ದೇವೆ. ಈದಿನಕ್ಕು ಈ ಸ್ಥಿತಿಯಲ್ಲಿ ಇದ್ದೇವೆ. ಈ ಜನ್ಮ ಸಹ ಶಾಶ್ವತವಾದದ್ದು ಅಲ್ಲ. ಗತದಲ್ಲಿ ಎಷ್ಟೋ ಜನ್ಮಗಳು ಬದಲಾಗಿರುವ ಹಾಗೆ ಪ್ರಸ್ತುತವಿರುವ ಜನ್ಮವನ್ನು ಸಹ ಬದಲಾಯಿಸಬೇಕಾಗಿರುವುದೇ. ಈ ಸೃಷ್ಠಿ ಯಾವಾಗ ತಯಾರಾಗಿದೆಯೋ ಖಚಿತವಾದ ಲೆಕ್ಕ ಯಾರ ಹತ್ತಿರ ಇಲ್ಲ. ಇಷ್ಟುಕಾಲ ಗತಿಸಿದೆಯೆಂದು ಕೆಲವರು ಹೇಳುತ್ತಿದ್ದರು, ಆ ಮಾತುಗಳು ಶಾಸ್ತ್ರಬದ್ದವಾಗಿರುವವು ಅಲ್ಲ. ಆದ್ದರಿಂದ ಅದು ಸತ್ಯ ಅಲ್ಲ. ನಡೆದಿರುವುದನ್ನು ಬಿಟ್ಟು, ನಡೆಯುತ್ತಿರುವುದನ್ನು ನೋಡಿದರೂ ಅದು ಯಾರಿಗೂ ಅರ್ಥವಾಗದ ಅಗಮ್ಯ ಅಗೋಚರ. ಜೀವಾತ್ಮನು ಮೋಕ್ಷ ಹೊಂದಿ ದೇವರಲ್ಲಿ ಐಕ್ಯವಾಗುವವರೆಗು ಪ್ರಪಂಚ ಕೊನೆಸಾಗುತ್ತಲೇ ಇರುತ್ತದೆ. ಜಗತ್ತಿಗೆ ಕೊನೆ ಎನ್ನುವುದು ಇಲ್ಲ. ಕೊನೆ ಎನ್ನುವುದು ಒಂದು ಮೋಕ್ಷದಲ್ಲಿಯೇ ನಡೆಯಬೇಕು. ಪ್ರಳಯದಲ್ಲಿ ನಡೆಯುವುದಿಲ್ಲ. ಮೋಕ್ಷ ಎನ್ನುವುದು ದೇವರು ಹೇಳಿದ ಜ್ಞಾನದಿಂದ ಲಭಿಸುತ್ತದೆ. ಈ ದಿನ ದೇವರ ಜ್ಞಾನದ ಮೇಲೆ ಆಸಕ್ತಿ ಇರುವವರು ಕಡಿಮೆಯಾಗಿ ಹೋಗಿದ್ದಾರೆ. ಅಷ್ಟೇ ಅಲ್ಲದೇ ದೇವರ ಜ್ಞಾನ ಎಂದರೆ ಏನೋ ಯಾರಿಗೂ

ತಿಳಿಯದೇ ಹೋಗಿದೆ. ಆದ್ದರಿಂದ ದೇವರಲ್ಲಿ ಸೇರಿ ಹೋಗುವವರು ಇಲ್ಲದಿರುವುದರಿಂದ ಸೃಷ್ಠಿಯಲ್ಲಿ ಹುಟ್ಟಿದ ಜಗತಿ ಸ್ಥಿರಸ್ಥಾಯಿಯಾಗಿ ಜನ್ಮಗಳು ಬದಲಾಯಿಸುತ್ತಾ ಸಾಗಿ ಹೋಗಬೇಕಾದ್ದೆ. ಜನನ ಮರಣಗಳನ್ನು ಹೊಂದುವ ಮನುಷ್ಯ, ಕಾಲದಲ್ಲಿಯೇ ಬದುಕಬೇಕು. ಆದರೆ ಕಾಲದಲ್ಲಿ ಯಾವ ಯುಗಕ್ಕು ಅಂತ್ಯವಿಲ್ಲ. ಕಲಿಯುಗ ಅಷ್ಟುಕ್ಕೂ ಅಂತ್ಯವಾಗದು. ಇನ್ನೂ ಒತ್ತಿ ಹೇಳಿದರೆ **“ಕಲಿಯುಗ ಎಂದಿಗೂ ಅಂತ್ಯವಾಗದು”** ಎಂದು ಹೇಳಬಹುದು.

ಮನುಷ್ಯ ಪ್ರಳಯ ಪ್ರಭವ ಎನ್ನುವ ಮಾತುಗಳನ್ನು ಕೇಳುತ್ತಿದ್ದಾನೆ. ಆದರೆ ಅವು ಹೇಗಿರುತ್ತವೋ, ಅವುಗಳ ವಾಸ್ತವರೂಪ ಏನೋ ದೊಡ್ಡ ಸ್ವಾಮೀಜಿಗಳಿಗೂ ಸಹ ಇಲ್ಲಿಯವರೆಗು ತಿಳಿದಿಲ್ಲ. ಮನುಷ್ಯರೆಲ್ಲರಿಗೂ ತಿಳಿದಿರುವುದು ಮರಣ ಒಂದೇ. ಪ್ರಳಯ ಎನ್ನುತ್ತಲೇ ಅದನ್ನು ಮನುಷ್ಯ ಮರಣವಾಗಿ ಲೆಕ್ಕಿಸಿಕೊಳ್ಳುತ್ತಿದ್ದಾನೆ. ಪ್ರಳಯ ಮರಣವಂತದ್ದೆ, ಆದರೆ ಮರಣ ಅಲ್ಲವೆಂದು ಯಾರಿಗೂ ತಿಳಿಯದು. ಪ್ರಳಯಕ್ಕು, ಮರಣಕ್ಕು ಸ್ವಲ್ಪ ವ್ಯತ್ಯಾಸವಿದೆ. 1) ಮರಣದಲ್ಲಿ ಜೀವಿಯ ಶರೀರ ಬದಲಾಗಿಹೋಗುತ್ತದೆ. ಪ್ರಳಯದಲ್ಲಿ ಜೀವಿಯ ಶರೀರವನ್ನು ಬದಲಾಯಿಸುವುದಿಲ್ಲ. 2) ಮರಣ ಹೊಂದಿದ ಜೀವಿಯು ಒಂದು ಕ್ಷಣವು ಸಹ ಆಲಸ್ಯಮಾಡದೆ ಎರಡನೆ ಶರೀರವನ್ನು ಸೇರಿ ಜನ್ಮಿಸುತ್ತಿದ್ದಾನೆ. ಪ್ರಳಯವನ್ನು ಹೊಂದಿದ ಜೀವಿಯು ಕೂಡಲೇ ಪ್ರಭವವನ್ನು ಹೊಂದುವುದಿಲ್ಲ. ಪ್ರಳಯಕ್ಕೂ ಪ್ರಭವಕ್ಕೂ ಮಧ್ಯದಲ್ಲಿ ಸ್ವಲ್ಪ ಸಮಯ ಕಳೆದು ಹೋಗುತ್ತದೆ. 3) ಮರಣದಲ್ಲಿ ಸ್ಥೂಲ ಶರೀರದೊಂದಿಗೆ ಸೂಕ್ಷ್ಮ ಶರೀರವನ್ನು ಸಹ ಜೀವಿಯು ಕಳೆದುಕೊಳ್ಳುತ್ತಿದ್ದಾನೆ. ಪ್ರಳಯದಲ್ಲಿ ಸ್ಥೂಲ, ಸೂಕ್ಷ್ಮ ಶರೀರಗಳು ಎರಡು ಇಲ್ಲದೇ ಹೋಗುತ್ತಿವೆ. ನಂತರ ಪ್ರಭವದಲ್ಲಿ ಅದೇ ಸೂಕ್ಷ್ಮ, ಸ್ಥೂಲ ಶರೀರಗಳನ್ನು ಜೀವಿಯು ಹೊಂದುತ್ತಿದ್ದಾನೆ. 4) ಮರಣದಲ್ಲಿ ಮನುಷ್ಯ ಜ್ಞಾಪಕಗಳನ್ನು ಕಳೆದುಕೊಳ್ಳುತ್ತಾನೆ. ಪ್ರಳಯದಲ್ಲಿ ಮನುಷ್ಯ ಕಳೆದುಕೊಂಡ ಜ್ಞಾಪಕವನ್ನು (ನೆನಪನ್ನು) ಪ್ರಭವದಲ್ಲಿ ಪುನಃ ಹೊಂದುತ್ತಿದ್ದಾನೆ. 5) ಮರಣದಲ್ಲಿ ಪ್ರಾರಬ್ಧಕರ್ಮ ಮುಗಿದುಹೋಗಿ ಮರುಕ್ಷಣವೇ ನಡೆಯುವ ಜನ್ಮದಲ್ಲಿ ಹೊಸ ಪ್ರಾರಬ್ಧಕರ್ಮ ಏರ್ಪಡುತ್ತದೆ. ಪ್ರಳಯದಲ್ಲಿ ಹಳೆಯ ಪ್ರಾರಬ್ಧಕರ್ಮ ಮುಗಿದು

ಹೋಗುವುದಿಲ್ಲ. ಪ್ರಭವದಲ್ಲಿ ಹೊಸ ಪ್ರಾರಬ್ದಕರ್ಮ ಬರುವುದಿಲ್ಲ. 6) ಮನುಷ್ಯ ಮರಣಹೊಂದಿದಾಗ ಇರುವ ಸಂಚಿತ ಕರ್ಮದಿಂದ, ಮರುಕ್ಷಣದಲ್ಲಿ ನಡೆಯುವ ಜನನದಲ್ಲಿ ಪ್ರಾರಬ್ಧಕರ್ಮ ಏರ್ಪಡುತ್ತದೆ. 7) ಪ್ರಳಯದಲ್ಲಿ ಯಾವುದೇ ಕರ್ಮ ಬದಲಾವಣೆ ನಡೆಯುವುದಿಲ್ಲ. ಮನುಷ್ಯ (ಜೀವಾತ್ಮ) ಯಾವ ಪ್ರಾಂತದಲ್ಲಿ, ಯಾವ ಸ್ಥಳದಲ್ಲಿ ಮರಣಿಸಿದರೆ ಅದೇ ಪ್ರಾಂತದಲ್ಲಿ, ಅದೇ ಸ್ಥಳದಲ್ಲಿ ಪುನಃ ಹುಟ್ಟುತ್ತೇವೆಂಬ ನಂಬಿಕೆ ಇಲ್ಲ. ಆದರೆ ಮನುಷ್ಯ ಯಾವ ಪ್ರಾಂತದಲ್ಲಿ, ಯಾವ ಸ್ಥಳದಲ್ಲಿ ಪ್ರಳಯವನ್ನು ಹೊಂದಿದರೆ ಅದೇ ಸ್ಥಳದಲ್ಲಿ, ಅದೇ ಪ್ರಾಂತದಲ್ಲಿ ಪ್ರಭವವನ್ನು ಹೊಂದುವನು. 8) ಮರಣದಲ್ಲಿ ಜೀವಿಯು ಮೋಕ್ಷ ಹೊಂದುವುದಕ್ಕೆ ಅವಕಾಶ ಇದೆ. ಪ್ರಳಯದಲ್ಲಿ ಅಂತಹ ಅವಕಾಶ ಯಾವುದೂ ಇಲ್ಲ. ಈ ವಿಧವಾಗಿ ಹೇಳಿಕೊಳ್ಳುತ್ತಾಹೋದರೆ ಪ್ರಳಯಕ್ಕು ಮರಣಕ್ಕು ಎಷ್ಟೋ ವಿಧಗಳ ಭೇದಗಳಿವೆ.

| **ಮರಣ – ಜನನ** | **ಪ್ರಳಯ – ಪ್ರಭವ** |
|---|---|
| 1) ಮರಣದಲ್ಲಿ ಜೀವಿಯ ಹಳೆ ಶರೀರ ಹೋಗಿ, ಜನನದಲ್ಲಿ ಹೊಸ ಶರೀರ ಬರುತ್ತದೆ. | 1) ಪ್ರಳಯದಲ್ಲಿ ಜೀವಿಯ ಹಳೆಯ ಶರೀರ ಹೋಗುವುದಿಲ್ಲ, ಪ್ರಭವದಲ್ಲಿ ಹೊಸ ಶರೀರ ಬರುವುದಿಲ್ಲ. |
| 2) ಮರಣದಲ್ಲಿ ಒಂದು ಕ್ಷಣವೂ ಕೂಡ ಆಲಸ್ಯ ಇಲ್ಲದೆ ಜನನವನ್ನು ಹೊಂದುತ್ತಿದ್ದಾನೆ. ಮರಣಕ್ಕು ಜನನಕ್ಕು ಮಧ್ಯದಲ್ಲಿ ಒಂದು ಕ್ಷಣವೂ ಸಹ ಸಮಯವಿಲ್ಲ. | 2) ಪ್ರಳಯವನ್ನು ಹೊಂದಿದ ಜೀವಿಯು ತಕ್ಷಣವೇ ಪ್ರಭವವನ್ನು ಹೊಂದುವುದಿಲ್ಲ. ಪ್ರಳಯಕ್ಕೂ ಪ್ರಭವಕ್ಕೂ ಮಧ್ಯದಲ್ಲಿ ಸ್ವಲ್ಪ ಸಮಯ ಕಳೆದು ಹೋಗುತ್ತದೆ. |
| 3) ಮರಣದಲ್ಲಿ ಸ್ಥೂಲ ಶರೀರದೊಂದಿಗೆ ಸೂಕ್ಷ್ಮ ಶರೀರವನ್ನು ಸಹ ಜೀವಿಯು ಬಿಟ್ಟು ಹೋಗುತ್ತಾನೆ. | 3) ಪ್ರಳಯದಲ್ಲಿ ಸ್ಥೂಲ, ಸೂಕ್ಷ್ಮ ಶರೀರಗಳು ಎರಡೂ ಇಲ್ಲದೆ ಹೋಗುತ್ತಿವೆ. ನಂತರ ಪ್ರಭವದಲ್ಲಿ |

| | |
|---|---|
| ಜನನದಲ್ಲಿ ಹಳೆಯದನ್ನಲ್ಲದೆ ಹೊಸದನ್ನು ಹೊಂದುತ್ತಿದ್ದಾನೆ. | ಅದೇ ಸ್ಥೂಲ, ಸೂಕ್ಷ್ಮ ಶರೀರಗಳನ್ನು ಹೊಂದುತ್ತಿದ್ದಾನೆ. |
| 4) ಮರಣದಲ್ಲಿ ಮನುಷ್ಯ ಜ್ಞಾಪಕ ಗಳನ್ನು ಕಳೆದುಕೊಳ್ಳುತ್ತಿದ್ದಾನೆ. | 4) ಪ್ರಳಯದಲ್ಲಿ ಮನುಷ್ಯ ಕಳೆದು ಕೊಂಡ ಜ್ಞಾಪಕಗಳನ್ನು ಪುನಃ ಪ್ರಭವದಲ್ಲಿ ಹೊಂದುತ್ತಿದ್ದಾನೆ. |
| 5)ಮರಣದಲ್ಲಿ ಹಳೆಯ ಪ್ರಾರಬ್ಧಕರ್ಮ ಮುಗಿದುಹೋಗಿ, ತಕ್ಷಣವೇ ಬರುವ ಜನ್ಮದಲ್ಲಿ ಹೊಸ ಪ್ರಾರಬ್ಧ ಕರ್ಮ ಏರ್ಪಡುತ್ತದೆ. | 5) ಪ್ರಳಯದಲ್ಲಿ ಹಳೆಯ ಪ್ರಾರಬ್ಧ ಕರ್ಮ ಮುಗಿದು ಹೋಗುವುದಿಲ್ಲ. ಪ್ರಭವದಲ್ಲಿ ಹೊಸ ಪ್ರಾರಬ್ಧ ಕರ್ಮ ಬರುವುದಿಲ್ಲ. |
| 6) ಮರಣದಲ್ಲಿರುವ ಸಂಚಿತ ಕರ್ಮದಿಂದ ಮರುಕ್ಷಣದಲ್ಲಿ ಬರುವ ಜನನದಲ್ಲಿ ಪ್ರಾರಬ್ಧಕರ್ಮ ಏರ್ಪಡುತ್ತದೆ. | 6) ಪ್ರಳಯದಲ್ಲಿರುವ ಸಂಚಿತ ಕರ್ಮದಿಂದ ಪ್ರಭವದಲ್ಲಿ ಪ್ರಾರಬ್ಧ ಕರ್ಮ ಏರ್ಪಡುವುದಿಲ್ಲ |
| 7) ಮರಣದಲ್ಲಿ ಮನುಷ್ಯಯಾವ ಪ್ರಾಂತದಲ್ಲಿ, ಯಾವ ಸ್ಥಳದಲ್ಲಿ ಇದ್ದರೆ ಅದೇ ಪ್ರಾಂತದಲ್ಲಿ ಅದೇ ಸ್ಥಳದಲ್ಲಿ ಪುನಃ ಹುಟ್ಟುತ್ತಾನೆನ್ನುವ ನಂಬಿಕೆ ಇಲ್ಲ. | 7) ಪ್ರಳಯದಲ್ಲಿ ಮನುಷ್ಯ ಯಾವ ಪ್ರಾಂತದಲ್ಲಿ, ಯಾವ ಸ್ಥಳದಲ್ಲಿ ಇರುತ್ತಾನೋ, ಪ್ರಭವದಲ್ಲಿ ಅದೇ ಪ್ರಾಂತದಲ್ಲಿ ಅದೇ ಸ್ಥಳದಲ್ಲಿ ಇರುವನು. |
| 8) ಮರಣದಲ್ಲಿ ಜೀವಾತ್ಮನು ಮೋಕ್ಷವನ್ನು ಹೊಂದುವುದಕ್ಕೆ ಅವಕಾಶ ಇದೆ. | 8) ಪ್ರಳಯದಲ್ಲಿ ಜೀವಾತ್ಮನು ಮೋಕ್ಷವನ್ನು ಹೊಂದುವ ಅವಕಾಶ ಯಾವ ಮಾತ್ರವು ಇಲ್ಲ. |

| | |
|---|---|
| 9) ಮರಣ ಹೊಂದಿದವನು ಹುಟ್ಟದೆ ತಪ್ಪುವುದಿಲ್ಲ. | 9) ಪ್ರಳಯ ಹೊಂದಿದವನು ಪ್ರಭವ ಹೊಂದದೆ ತಪ್ಪುವುದಿಲ್ಲ. |

ಈ ವಿಧವಾಗಿ ವಿವರಿಸಿಕೊಂಡು ನೋಡಿದರೆ ಹುಟ್ಟುಸಾವುಗಳು ಬೇರೆಯೆಂದು, ಪ್ರಳಯ ಪ್ರಭವಗಳು ಬೇರೆಯೆಂದು, ಒಬ್ಬ ಜೀವಿಗೆ ಅವುಗಳ ಅನುಭವಗಳು ಬೇರೆಯೆಂದು ತಿಳಿದು ಹೋಗುತ್ತದೆ. ಪ್ರಸ್ತುತ ಸಜೀವವಾಗಿರುವ ಮನುಷ್ಯನಿಗೆ ಹುಟ್ಟು ಮರಣಗಳಲ್ಲಿ ಹುಟ್ಟುವುದು ನಡೆದುಹೋಗಿದೆ, ಇನ್ನೂ ನಡೆಯಬೇಕಾಗಿರುವುದು ಮರಣ ಮಾತ್ರವೇ. ಹಾಗೆ ಪ್ರಳಯ ಪ್ರಭವಗಳಲ್ಲಿ ಪ್ರಭವ ನಡೆದುಹೋಗಿದೆ, ಇನ್ನೂ ಪ್ರಳಯ ಮಾತ್ರವೇ ನಡೆಯಬೇಕಾಗಿದೆ. ಮನುಷ್ಯನಿಗೆ ನಡೆಯುತ್ತಿರುವ ಮರಣದಲ್ಲಾಗಲಿ, ಪ್ರಳಯದಲ್ಲಾಗಲಿ ಎಷ್ಟೋ ಬೇರೆಬೇರೆ ಬದಲಾವಣೆಗಳಿದ್ದರೂ, ಎರಡರಿಂದ ಜೀವಾತ್ಮನಿಗೆ ಅನುಭವ ಮಾತ್ರ ಒಂದೇ ವಿಧವಾಗಿ ಇರುತ್ತದೆ. ಮರಣ ಸಮಯವಾಗಲಿ, ಪ್ರಳಯ ಸಮಯವಾಗಲಿ ಜೀವಿಗೆ ಏನು ನಡೆಯುತ್ತದೆಯೋ ವಿವರಿಸಿ ಹೇಳಿದರೆ, ಯಾವ ಜೀವಿಗಾಗಲಿ ಮರಣದವರೆಗು ಇರುವ ಅನುಭವ ತಿಳಿಯುವುದು. ಆದರೆ ಮರಣ ಹೊಂದುವ ಸಮಯದಲ್ಲಿ ಜೀವಿಗೆ ಯಾವ ಅನುಭವವೂ ಇರುವುದಿಲ್ಲ. ಹಾಗೆ ಯಾವ ಜೀವಿಯಾದರು ಪ್ರಳಯದವರೆಗು ಇರುವ ಅನುಭವವನ್ನು ಅನುಭವಿಸಿರಬಹುದು. ಆದರೆ ಪ್ರಳಯ ಹೊಂದುವ ಸಮಯದಲ್ಲಿ ಜೀವಿಗೆ ಯಾವ ಅನುಭವವೂ ಇರುವುದಿಲ್ಲ. ಆದ್ದರಿಂದ ಮರಣ, ಪ್ರಳಯ ಎರಡೂ ಒಂದೇ ವಿಧವಾಗಿ ಜೀವಾತ್ಮನ ಅನುಭವಕ್ಕೆ ಸಿಗುವುದಿಲ್ಲ ಎಂದು ಹೇಳಬಹುದು. ಅದೇ ವಿಧವಾಗಿ ಜನನವಾಗಲಿ, ಪ್ರಭವವಾಗಲಿ ಯಾರ ಅನುಭವಕ್ಕೆ ಬರುವುದಿಲ್ಲ. ಹಾಗೆ ಜನನ ಮರಣಗಳು, ಪ್ರಳಯ ಸಂಭವಗಳು ಎರಡು ಅನುಭವಕ್ಕೆ ಬರದೆ ಹೋಗುವುದಕ್ಕೆ ಕಾರಣ ಏನೆಂದರೆ! ಹುಟ್ಟು ಸಾವುಗಳು, ಪ್ರಳಯ ಪ್ರಭವಗಳು ಎರಡೂ ಕರ್ಮಕ್ಕೆ ಅತೀತವಾಗಿವೆ. ಕರ್ಮವಾದರೇನೆ ಜೀವಾತ್ಮನ ಅನುಭವಕ್ಕೆ ಬರುತ್ತದೆ. ಆದರೆ ಕರ್ಮವಲ್ಲದ ಯಾವುದೇ ಆಗಲಿ ಜೀವಿಯ ಅನುಭವಕ್ಕೆ ಬರುವುದಿಲ್ಲ. ಆದ್ದರಿಂದ ಅನಂತ

ವಿಶ್ವದಲ್ಲಿ ಯಾವ ಜೀವರಾಶಿ ಇತ್ತ ಜನನ ಮರಣಗಳನ್ನಾಗಲಿ, ಅತ್ತ ಪ್ರಳಯ ಸಂಭವಗಳನ್ನಾಗಲಿ ಅನುಭವಿಸಲಿಲ್ಲ. ಅನುಭವಕ್ಕೆ ಬರುವ ವಿಷಯ ಮಾತ್ರವೆ ಜೀವಿಗೆ ತಿಳಿಯುವುದು. ಅನುಭವಕ್ಕೆ ಬಾರದ ವಿಷಯವನ್ನು ಜೀವಿಯು ಏನೂ ಹೇಳಲಾರನು. ಆದರೆ ಈಗ ಕೆಲವರು ತಿಳಿವಳಿಕೆ ಇರುವವರು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! "ಪ್ರಪಂಚದಲ್ಲಿ ಎಲ್ಲರೊಂದಿಗೆ ನೀವು ಸಹ ಒಂದು ಜೀವಿಯೇ ಅಲ್ಲವೆ! ಆಗಿರುವಾಗ ಹುಟ್ಟುಸಾವುಗಳಾಗಲಿ, ಪ್ರಳಯ ಪ್ರಭವಗಳಾಗಲಿ ನಿಮ್ಮ ಅನುಭವಕ್ಕು ಸಹ ಬರುವುದಿಲ್ಲ ಅಲ್ಲವೆ! ನಿಮ್ಮ ಅನುಭವಕ್ಕೆ ಬಾರದ ವಿಷಯವನ್ನು ನೀವು ಹೇಗೆ ಬರೆದಿದ್ದೀರಾ" ಎಂದು ಕೇಳಬಹುದು ಅದಕ್ಕೆ ನಮ್ಮ ಉತ್ತರ ಏನೆಂದರೆ!

ನಾನು ಈಗ ನಿಮ್ಮಹಾಗೆ ಜೀವಾತ್ಮ ಎಂದು ಅಂದರೆ 1980 ರಲ್ಲಿ ಬರೆದ **"ಜನನ ಮರಣ ಸಿದ್ಧಾಂತ"** ಆಗಲಿ, ಈ ಮಧ್ಯ ಕಾಲದಲ್ಲಿ ಬರೆದ **"ಮರಣ ರಹಸ್ಯ", "ಪುನರ್ಜನ್ಮ ರಹಸ್ಯ", "ತ್ರೈತಾಕಾರ ರಹಸ್ಯ", "ಸಮಾಧಿ",** ಮತ್ತು ಪ್ರಸ್ತುತದಲ್ಲಿ ಬರೆದ **"ಕಲಿಯುಗ ಎಂದಿಗೂ ಅಂತ್ಯವಾಗದು"** ಎಂಬ ಈ ಆರು ಗ್ರಂಥಗಳಲ್ಲಿ ಹೇಳಿದ ಜ್ಞಾನವೆಲ್ಲಾ ಎಲ್ಲರ ದೃಷ್ಟಿಯಲ್ಲಿ ಅಸತ್ಯವಾಗಿ ಕಾಣಿಸುವುದು. ನನಗೆ ತಿಳಿಯದಿದ್ದರೂ, ನನ್ನ ಅನುಭವಕ್ಕೆ ಬಾರದಿದ್ದರೂ ನಾನು ನಿಮ್ಮನ್ನು ಮೋಸಗೊಳಿಸಿ ಬರೆದಂತಾಗುತ್ತದೆ. ಇಲ್ಲ ನಾನು ಸತ್ಯವನ್ನೇ ಹೇಳುತ್ತಿದ್ದೇನೆ ಎಂದರೆ ಅದಕ್ಕಿಂತ ಮೊದಲು ನಾನು ಜೀವಿಯು ಅಲ್ಲ ಎಂದು ಹೇಳಬೇಕು. ನಾನು ಜೀವಾತ್ಮನೆಂದು ಹೇಳಿದರೆ ಇಲ್ಲಿಯವರೆಗು ಯಾರಿಗೂ ತಿಳಿದಿಲ್ಲವೆಂದು ಹೇಳಿದ ರಹಸ್ಯಗಳು ಎಲ್ಲ ಎಲ್ಲರಿಗೂ ಅಸತ್ಯವಾಗಿ ಕಾಣಿಸುತ್ತವೆ. ಹೇಳಿದ ಜ್ಞಾನವೆಲ್ಲಾ ಅಸತ್ಯವಲ್ಲ ಸತ್ಯವೆ ಅಂದರೆ, ನಾನು ಜೀವಾತ್ಮನಲ್ಲ ಎಂದು ಹೇಳಬೇಕಾಗಿ ಬರುತ್ತದೆ. ಇಂತಹ ಕಷ್ಟ ಪರಿಸ್ಥಿತಿಯಲ್ಲಿ ದಾರಿ ತಿಳಿಯದೆ ಕಷ್ಟಪಡದಹಾಗೆ ಕೆಲವು ನಿಮಿಷಗಳು ಆಲಸ್ಯವಾದರೂ ನನ್ನಿಂದ ಸರಿಯಾದ ಉತ್ತರವೇ ಹೊರಬಂದಿದೆ. ಆ ಉತ್ತರ ಹೀಗಿದೆ. ಪ್ರತಿ ಮನುಷ್ಯನಲ್ಲಿಯೂ ಜೀವಾತ್ಮ, ಆತ್ಮ ಎರಡು ಇವೆ. ಜೀವಾತ್ಮ ಎಲ್ಲವನ್ನು ಶರೀರದಲ್ಲಿ ಅನುಭವಿ

ಸುವವನೇ ಅಲ್ಲದೆ, ಅನುಭವಿಸುವಂತೆ ಮಾಡುವುದು ಆತ್ಮ ಇದೆ. ಜೀವಾತ್ಮನಿಗೆ ಶರೀರದಲ್ಲಿ ಅನುಭವಕ್ಕೆ ಬಂದಿರುವ ವಿಷಯಗಳಷ್ಟೇ ತಿಳಿದಿದೆ. ಆದರೆ ಆತ್ಮಕ್ಕೆ ಶರೀರದಲ್ಲಿ ಜೀವಾತ್ಮನ ಅನುಭವಕ್ಕೆ ಬಾರದ ಎಲ್ಲ ಕೆಲಸಗಳ ವಿವರ ತಿಳಿದಿದೆ. ವಿವರವಾಗಿ ಹೇಳಿದರೆ ಮರಣದಲ್ಲಾಗಲಿ, ಜನನದಲ್ಲಾಗಲಿ, ಹಾಗೆ ಪ್ರಳಯ ಪ್ರಭವಗಳಲ್ಲಾಗಲಿ, ಜೀವಿಗೆ ತಿಳಿಯದಿರುವುದು ಯಾವುದಾದರೂ ಎಲ್ಲಾ ಶರೀರದಲ್ಲಿನ ಆತ್ಮಕ್ಕೆ ತಿಳಿದಿರುವುದು. ಇಲ್ಲಿಯವರೆಗು ಹೇಳಿದ ಜ್ಞಾನವೆಲ್ಲಾ ನಾವು ಹೇಳಿರುವುದೇ, ಆದರೆ ನಾನು ಹೇಳಿರುವುದು ಅಲ್ಲ. ನನ್ನ ಆತ್ಮ ಹೇಳಿದ್ದರಿಂದ ನನಗೆ ತಿಳಿದಿದೆ, ಆದರೆ ನನಗೆ ಮಾತ್ರ ಸ್ವತಃವಾಗಿ ತಿಳಿದಿಲ್ಲ. ಆದ್ದರಿಂದ ಬರೆದ ಗ್ರಂಥಗಳು, ಹೇಳಿದ ಜ್ಞಾನವು ಎಲ್ಲಾ ನನ್ನದಲ್ಲವೆಂದು, ನನ್ನ ಆತ್ಮದೆಂದು ತಿಳಿಯಬೇಕು. ನಿಮ್ಮ ಶರೀರದಲ್ಲಿಯೂ ಸಹ ಆತ್ಮ ಇದೆ. ಅದಕ್ಕೂ ಸಹ ಎಲ್ಲ ಗೊತ್ತು. ಆದರೆ ನಿಮ್ಮ ಆತ್ಮವನ್ನು ನೀವು ಏನೂ ಕೇಳಿಲ್ಲ. ನಿಮ್ಮ ಶರೀರದಲ್ಲಿ ನಿಮ್ಮೊಂದಿಗೆ ಒಂದು ಆತ್ಮ ಇದೆಯೆಂದು ನಿಮಗೆ ತಿಳಿದಿಲ್ಲ. ನಿಮ್ಮ ಶರೀರದಲ್ಲಿ ಆತ್ಮ ಎಲ್ಲಿದೆಯೋ, ಹೇಗಿದೆಯೋ, ಅದರ ಕೆಲಸವೇನೋ, ಅದರೊಂದಿಗೆ ಹೇಗೆ ಮಾತನಾಡಬೇಕೋ ನೀನು ತಿಳಿದುಕೊಂಡರೆ ನನಗೆ ನನ್ನ ಆತ್ಮ ಹೇಳಿದ ಹಾಗೆ, ನಿನಗೂ ಸಹ ನಿನ್ನ ಆತ್ಮ ಹೇಳಬಲ್ಲದು. ನೀನಂದರೆ ಯಾರೋ ನಿನಗೇ ತಿಳಿದಿಲ್ಲ. ಹಾಗಿರುವಾಗ ನಿನ್ನ ಪಕ್ಕದಲ್ಲೇ ಇರುವ ಆತ್ಮ ಹೇಗೆ ತಿಳಿಯುತ್ತದೆ? ನನಗೆ ತಿಳಿದಹಾಗೆ ಆಧ್ಯಾತ್ಮಿಕ ರಹಸ್ಯಗಳು ತಿಳಿಯಬೇಕೆಂದರೆ ಮೊದಲು ನಿನ್ನನ್ನು ನೀನು ತಿಳಿದುಕೊ, ಶರೀರದಲ್ಲಿ ನೀನು ಎಲ್ಲಿದ್ದೀಯೊ ತಿಳಿದುಕೊ, ಅಲ್ಲಿ ನಿನ್ನ ಕೆಲಸವೇನೊ ತಿಳಿದುಕೊ, ಆನಂತರ ನಿನ್ನ ಆತ್ಮ ನಿನಗೆ ತಿಳಿಯುತ್ತದೆ. ಆಗ ನನ್ನ ಹಾಗೆ ನೀನು ಸಹ ಆಗಬಹುದು.

ಪ್ರಸ್ತುತ ಕಾಲದಲ್ಲಿ ಎಲ್ಲರೂ ಮನುಷ್ಯರೇ ಆದರೂ, ಎಲ್ಲರಿಗೂ ಒಂದೇ ದೇವರಿದ್ದರು, ಮನುಷ್ಯ ಅಜ್ಞಾನದಿಂದ ಮತಗಳಾಗಿ ಬೇರ್ಪಟ್ಟು, ಒಂದೇ ಜಾತಿ ಮನುಷ್ಯರನ್ನು ವಿವಿಧ ತರಹದ ಮತಸ್ಥರಾಗಿ ಹೇಳಿಕೊಳ್ಳುತ್ತಿದ್ದಾರೆ. ಹಾಗೆ ಅವರವರ ಮತಗಳ ವಿಧಾನವನ್ನು ಅನುಸರಿಸಿ ಇದ್ದರು ಒಬ್ಬನೇ

ದೇವರನ್ನು ನಿಮ್ಮ ದೇವರು ನಮ್ಮ ದೇವರು ಎಂದು ಬೇರ್ಪಡಿಸಿಕೊಂಡಿದ್ದಾರೆ. ಮನುಷ್ಯ ಅಜ್ಞಾನದಿಂದ ಮತಗಳಲ್ಲಿಯೂ ದೇವರಲ್ಲಿಯೂ ಬೇರೆಬೇರೆ ಭಾವನೆಗಳನ್ನು ಹೊಂದಿದ್ದರೂ, ಎಲ್ಲರಿಗೂ ಮರಣ ಜನನ ಒಂದೇ ವಿಧವಾಗಿವೆ. ಪ್ರಳಯ ಪ್ರಭವ ಸಹ ಒಂದೇ ವಿಧವಾಗಿ ಇದೆ. ಪ್ರಳಯ ಪ್ರಭವ ಸಹ ಒಂದೇ ವಿಧವಾಗಿ ಇದ್ದರೂ, ಅವರವರ ಮತಗಳನ್ನು ಅನುಸರಿಸಿ ಬೇರೆಬೇರೆಯಾಗಿ ಅರ್ಥವನ್ನು ಮಾಡಿಕೊಂಡಿದ್ದಾರೆ. ಕೆಲವು ಮತಗಳಲ್ಲಿ ಮರಣವನ್ನು ಪ್ರಳಯ ಎಂದು ಅಂದುಕೊಳ್ಳುತ್ತಿದ್ದಾರೆ. ಒಂದು ಬಾರಿ ಹುಟ್ಟಿದವನು ಒಂದೇ ಬಾರಿಯೇ ಪ್ರಳಯ ಹೊಂದುವನೆಂದು, ಪುನಃ ಹುಟ್ಟುವುದಿಲ್ಲವೆಂದು ಹೇಳುವುದು ಸಹ ನಡೆಯುತ್ತಿದೆ. ಅವರ ಮತ ಮೂಲಗ್ರಂಥಗಳಲ್ಲಿ ಆ ವಿಷಯ ಇಲ್ಲದಿದ್ದರೂ ಅವರ ಅವಗಾಹನೆ ಲೋಪದಿಂದ ತಪ್ಪಾಗಿ ಹೇಳಿಕೊಳ್ಳುತ್ತಿದ್ದಾರೆ. ಹುಟ್ಟಿದವನು ಪ್ರಳಯ ಹೊಂದಿ ಪುನಃ ಹುಟ್ಟುವುದಿಲ್ಲವೆಂದು ಹೇಳಿದಾಗ, ಅವರು ಮರಣವನ್ನು ಪ್ರಳಯವೆಂದು ಲೆಕ್ಕಿಸಿಕೊಳ್ಳುತ್ತಿದ್ದಾರೆಂದು ಅರ್ಥವಾಗಿ ಹೋಗುತ್ತದೆ. ಈ ವಿಧವಾಗಿ ಮರಣವನ್ನು ಪ್ರಳಯವನ್ನು ಒಂದೇ ಎಂದು ತಪ್ಪಾಗಿ ಅರ್ಥೈಯಿಸಿಕೊಂಡಿರುವುದಲ್ಲದೆ, ಸ್ವರ್ಗವನ್ನು, ಪರಲೋಕವನ್ನು ಸಹ ಒಂದೇ ಎಂದು ಲೆಕ್ಕಿಸಿಕೊಂಡಿದ್ದಾರೆ. ಸ್ವರ್ಗ, ಪರಲೋಕ ಬೇರೆಬೇರೆ ಎಂದು ತಿಳಿಯುವ ಹಾಗೆ ಮರಣವನ್ನು ಪ್ರಳಯವನ್ನು ಬೇರೆಬೇರೆ ಎಂದು ಅಂದುಕೊಂಡಿಲ್ಲ. **ಮರಣ ಒಂದು ಜೀವನವನ್ನು ಅಂತ್ಯ ಮಾಡುತ್ತಿದೆ, ಒಂದು ಜೀವಿಯನ್ನು ಅಲ್ಲ. ಹಾಗೇ ಒಂದು ಪ್ರಳಯವು ಒಂದು ಹಗಲನ್ನು ಅಂತ್ಯಮಾಡುತ್ತದೆ, ಒಂದು ಜೀವನವನ್ನು ಅಲ್ಲ.** ಜೀವಿಗೆ ಜೀವನಕ್ಕೆ, ಜೀವನಕ್ಕು ಹಗಲಿಕ್ಕು ವ್ಯತ್ಯಾಸ ತಿಳಿಯದವ ನನ್ನು ಜ್ಞಾನಿ ಎನ್ನುವುದಕ್ಕೆ ಅರ್ಹನಲ್ಲ.

ಮರಣವನ್ನು ಜೀವಿಯ ಕೊನೆಯ ಘಟ್ಟವೆಂದು ಲೆಕ್ಕಿಸಬಾರದು. ಮರಣ ಜೀವನದ ಒಂದು ಕೊನೆಯ ಘಟ್ಟವಾಗುತ್ತದೆ. ಹಾಗೆ ಪ್ರಳಯ ಜೀವಿಯ ನಾಶವಲ್ಲ. ಪ್ರಳಯ ತೀರ್ಪು ದಿನವೂ ಅಲ್ಲ. ಮರಣ ಮನುಷ್ಯನಿಗೆ ನಂತರ ಜನ್ಮ ಹೀಗೆ ಇರಬೇಕೆಂದು ತಿಳಿಸುವ ತೀರ್ಪು ದಿನವಾಗಿ ಇದೆ. ಮರಣ

ತೀರ್ಪು ಮತ್ತು ಬದಲಾಗುವ ದಿನವಾಗಿ ಇದೆ. ಪ್ರಳಯ ಯಾರಿಗೂ ತೀರ್ಪು ದಿನ ಬದಲಾಗುವ ದಿನವಲ್ಲ. ಮರಣ ಕರ್ಮಕ್ಕೆ ಅತೀತವಾಗಿ ಇದೆ. ಆದುದರಿಂದ ಮರಣ ವಿಷಯುವನ್ನೂ, ಪ್ರಳಯು ವಿಷಯುವನ್ನೂ ಜಾಗ್ರತೆಯಿಂದ ತಿಳಿದುಕೊಂಡರೆ, ಮೊದಲು ಮನುಷ್ಯ ಪ್ರಳಯವನ್ನು ಜಯಿಸಬಲ್ಲವನಾಗುತ್ತಾನೆ. ನಂತರ ಮರಣವನ್ನು ಜಯಿಸಬಲ್ಲವನಾಗುತ್ತಾನೆ. **ಪ್ರಳಯವನ್ನು ಕುರಿತು ತಿಳಿಯದೆ, ಮರಣವನ್ನು ಕುರಿತು ತಿಳಿಯಲಾರನು. ಮರಣವನ್ನು ಕುರಿತು ತಿಳಿಯದೆ, ಕೊನೆಯದಾದ ಮೋಕ್ಷ ಅಥವಾ ಪರಲೋಕವನ್ನು ಕುರಿತು ತಿಳಿಯಲಾರನು.** ಹುಟ್ಟಿದ ಪ್ರತಿ ಮನುಷ್ಯ ಯಾವ ಮತಸ್ಥನೇ ಆಗಲಿ ಅವನು ದೇವರಲ್ಲಿ ಐಕ್ಯವಾಗಿ ಹೋಗುವವನೇ. ದೇವರಲ್ಲಿ ಸೇರದೆ ಹೋದರೆ ಅವನಿಗೆ ಬೇರೆ ದಾರಿ ಇಲ್ಲದೆ ಅಥವಾ ಜನನ ಮರಣಗಳು, ಪ್ರಳಯ ಪ್ರಭವಗಳು ಹೊಂದುತ್ತಾ ಇರಬೇಕಾದ್ದೆ. ಅದ್ದರಿಂದ **ಮನುಷ್ಯ ಮರಣಿಸುವುದಕ್ಕೆ ಹುಟ್ಟಬಾರದು. ದೇವರನ್ನು ತಿಳಿಯುವುದಕ್ಕೆ ಹುಟ್ಟಬೇಕು. ದೇವರು ಮತಗಳಿಗೆ ಅತೀತನಾದ ಕಾಲ ಸ್ವರೂಪನು.** ಆದ್ದರಿಂದ ಕಾಲದಿಂದ ಪ್ರಾರಂಭಿಸಿ ಕೊನೆಯದಾದ ಕಲಿಯೋಗವೊಂದರ ಅಂತ್ಯವಿಲ್ಲದ ಸ್ಥಿತಿಯನ್ನು ಕುರಿತು ತಿಳಿದುಕೊಳ್ಳೋಣ. ನಾಶ ಮಾಡುವ ವನೊಂದಿಗೆ ಬೆರೆತುಹೋಗೋಣ ಎಂಬ ಅರ್ಥಕೊಡುವುದೇ ಕಲಿಯೋಗ ಎಂದು, ಕಲಿಯೋಗ ನಾಶವಾಗದು ಎಂದು ತಿಳಿದುಕೊಳ್ಳೋಣ.

**ಸಮಾಪ್ತ**



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**



**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

ಪ್ರಮುಖರ ಲೇಖೆ



# ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

**ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.**

**ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.**

**ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ**

**--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**Cell:09705864675, 09440556968, 9611133635**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







## ಸುವಾರ್ತ ಕ್ರೈಸ್ತವ ಸಂಘ (S.K.S)

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

**(Regd.No.: 459/2011)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

**e-mail id : info@khudaislamicspiritualsociety.org**

***www. khudaislamicspiritualsociety.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




## ಪ್ರಬೋಧ ಸೇವಾ ಸಮಿತಿ (P.S.S.)

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

*www. thraithashakam.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381

e-mail id : info@dravidashreshtisangham.org

***www.dravidashreshtisangham.org***

# ಕಲಿಯುಗ

## (ಎಂದಿಗೂ ಯುಗಾಂತವಾಗದು)




Author :

The Only Guru of Three Religions

The Spiritual Emperor, Thraitha Theorem Originator

Sri Acharya Prabodhananda Yogeeshwarulu


www.thraithashakam.org